## ಪತ್ರೀಜಿ ವಾಣಿ



# ಅಂತರ್ ವೈದ್ಯ

ಒಳಗಿರುವವನು ಸೃಷ್ಟಿಕರ್ತನು ----- ಹೊರಗಿರುವುದು ಅವನ ಸೃಷ್ಟಿಯು

ಒಳಗಿರುವುದು ಸಾಗರವು ----ಹೊರಗಿರುವುದು ಅಲೆಗಳು

ಒಳಗಿರುವುದು ಕಾರಣವು----ಹೊರಗಿರುವುದು ಅದರ ಪರಿಣಾಮ

ಒಳಗಿರುವುದು ಉದ್ದೇಶ ----ಹೊರಗೆ ಪೂರೈಸುವುದೇ ಅದರ ಆದೇಶ

★★★

ಒಳಗಿರುವುದು ಅಪರಿಚಿತ ----ಹೊರಗೆ ಇರುವುದು ಸುಪರಿಚಿತ

ಒಳಗಿರುವುದು ಸುಪ್ತ ಪ್ರಜ್ಞೆ----ಹೊರಗೆ ಇರುವುದು ಜಾಗೃತ ಪ್ರಜ್ಞೆ

ಒಳಗಿರುವುದು ಬೃಹತ್----ಹೊರಗಿರುವುದು ಅಣು ಮಾತ್ರ

ಒಳಗಿರುವವನು ಅರಸ ----ಹೊರಗಿರುವವನು ಪ್ರಜೆ

ಒಳಗೆ ಬಹುಮುಖಿ ವಿಸ್ತೀರ್ಣ----ಹೊರಗೆ ವಿವಿಧ

★★★

ಒಳಗೆ ಅಂತರ್ಜೀವನ----ಹೊರಗೆ ಭೌತಿಕ ಜೀವನ

ಒಳಗೆ ಇರುವುದು ಮನಸ್ಸು----ಹೊರಗೆ ಇರುವುದು ದೇಹ

★★★

ಒಳಗಿನಿಂದ ಎಚ್ಚರಗೊಳ್ಳಿ

ಒಳಗಿನಿಂದ ಸಚೇತನವಾಗಿರಿ

★★★

ಇದೇ ನಮ್ಮ ಹೊರಗೆ ಕಾಣಿಸುವ ವಿಕಾರಗಳನ್ನು ಗುಣಪಡಿಸಲು ಮಾರ್ಗ.

ಇದೇ ನಮ್ಮ ಹೊರಗೆ ವ್ಯಕ್ತವಾಗಿರುವ ವಿಕೃತಿಗಳನ್ನು ಸರಿಪಡಿಸಲು ಇರುವ ಸಾಧ್ಯತೆ.

★★★

ಹೊರಗಿರುವುದು ದೇಹ----ಒಳಗಿರುವುದು ಮನಸ್ಸು

ದೇಹವು ಹೊರಗಿರುವ ರೋಗಿ---ಒಳಗಿರುವುದೇ ಧನ್ವಂತರಿ

ದೇಹ-ಮನಸ್ಸಿನ ಸಂಬಂಧ ----ರೋಗಿ ವೈದ್ಯರ ಸಂಬಂಧ

ಒಳಗಿರುವುದು ವೈದ್ಯ----ಹೊರಗೆ ವೈದ್ಯೀಕರಿಸಿದ ದೇಹ

★★★

ಒಳಗಿನ ಅದ್ಭುತ ಶಕ್ತಿಯನ್ನು ಎಚ್ಚರಗೊಳಿಸಿ

ಒಳಗಿರುವ ಧನ್ವಂತರಿಯನ್ನು ಆರಾಧಿಸಿರಿ

ಧ್ಯಾನ ಮಾಡಿ ಆನಾಪಾನಸತಿ ಧ್ಯಾನ ಮಾಡಿ

-ಬ್ರಹ್ಮರ್ಷಿ ಪತ್ರೀಜಿ

# ಧ್ಯಾನ ಕಸ್ತೂರಿ



ಬ್ರಹ್ಮರ್ಷಿ ಸುಭಾಷ್ ಪತ್ರೀಜಿ
ಸಂಸ್ಥಾಪಕರು



ಶ್ರೀ ಎ. ಸತ್ಯನಾರಾಯಣ
ಸಂಪಾದಕರು



ಸಂತೋಷ್
ನಿರ್ವಾಹಕರು



ಅನಿತ
ನಿರ್ವಾಹಕರು



ಹರೀಶ್
ತಾಂತ್ರಿಕತೆ ಮತ್ತು ವಿನ್ಯಾಸ



ಅಯ್ಯಪ್ಪ
ತಾಂತ್ರಿಕತೆ ಮತ್ತು ವಿನ್ಯಾಸ


**ಸಂಪಾದಕ ಮಂಡಳಿ**

ಶ್ರೀ ಭೀಮೇಶ್ ರೆಡ್ಡಿ, ಬೆಂಗಳೂರು
ಶ್ರೀ ಲಕ್ಷ್ಮಿನಾರಾಯಣ, ಬೆಂಗಳೂರು
ಶ್ರೀ ಬಿ. ಶಿವರಾಮಪ್ಪ, ಬೆಂಗಳೂರು

**ಸೂರಾಟ ಸಹಾಯಕ ಮಂಡಳಿ**

1. ಶ್ರೀಮತಿ ಸರಳ, ಬೆಂಗಳೂರು
2. ಶ್ರೀಮತಿ ನಿರ್ಮಲ, ಬೆಂಗಳೂರು
3. ಶ್ರೀಮತಿ ಸಂಧ್ಯ, ಬೆಂಗಳೂರು
4. ಶ್ರೀ ಚಂದ್ರಮೋಹನ್, ಬೆಂಗಳೂರು



**ಮುದ್ರಕರು ಹಾಗೂ ಪ್ರಕಾಶಕರು :**

**ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್ (ರಿ.)**
ನಂ. 126, 2ನೇ ಮಹಡಿ, 7ನೇ ಮುಖ್ಯ ರಸ್ತೆ, 4ನೇ ಬಡಾವಣೆ,
ಪೋಲೀಸ್ ಠಾಣೆ ಎದುರು, ಜಯನಗರ, ಬೆಂಗಳೂರು – 560 011
ದೂರವಾಣಿ : 080-26646899, 9481359920, 9902761761

ಪ್ರಿಂಟರ್ಸ್ : ಡಾಟ್ಸ್ ಇನೋವೇಟೀವ್ ಪ್ರಿಂಟರ್ಸ್ ಸುಲ್ತಾನ್ ಪೇಟೆ, ಬೆಂಗಳೂರು
www.pssmovement.org


## ಪರಿವಿಡಿ




For any queries or suggestions,
E-mail : dhyanakasturi@gmail.com



## ಸಂಪಾದಕೀಯ

"ಧ್ಯಾನ ಮಾಡುವುದರಿಂದ ಮನುಷ್ಯ ದೇವರಾಗುತ್ತಾನೆ!" ಎನ್ನುತ್ತಾರೆ ಬ್ರಹ್ಮರ್ಷಿ ಪತ್ರೀಜಿಯವರು. ಧ್ಯಾನ ಎಂಬುದು ಸತ್ಯದೆಡೆಗೆ ಸಾಗುವ ಒಂದು ಆಧ್ಯಾತ್ಮಿಕ ಪ್ರಯಾಣ. ಆಧ್ಯಾತ್ಮಿಕ ಗುರಿಗಳನ್ನು ಸಾಧಿಸುವಲ್ಲಿ ಹಲವಾರು ಮಾರ್ಗಗಳು ಇವೆ. ಸಾಧನೆಯ ಮಾರ್ಗಗಳಲ್ಲಿ ಅತ್ಯಂತ ಸುಲಭವಾದ, ಸರಳವಾದ, ಖರ್ಚಿಲ್ಲದ ಮಾರ್ಗವೆಂದರೆ, ಅದು 'ಧ್ಯಾನ ಮಾರ್ಗ'. ಆಧ್ಯಾತ್ಮಿಕ ವಿಚಾರ ಸಾಹಿತ್ಯವನ್ನು ತಿಳಿದು, ಧ್ಯಾನ ಮಾರ್ಗದಲ್ಲಿ ಮುನ್ನಡೆದರೆ, ಆಧ್ಯಾತ್ಮಿಕ ಪ್ರಗತಿಯು ವೇಗವಾಗಿ ಸಾಗುತ್ತದೆ. ಬೇರೆಯವರ ಅನುಭವಗಳು ನಮ್ಮದಾಗಬೇಕಾದರೆ, ನಾವೇ ಸಾಧನೆಯನ್ನು ಮಾಡುವುದು ಅನಿವಾರ್ಯ. ಆದರೆ, ಇತರರ ಅನುಭವಗಳು ನಮ್ಮ ಸಾಧನೆಗೆ ಪ್ರೇರಣೆ ಆಗಬೇಕು. ಈ ಉದ್ದೇಶದಿಂದ ಸ್ವಾಧ್ಯಾಯ ಎನ್ನುವುದಕ್ಕೆ ಪ್ರಾಮುಖ್ಯತೆ ಇದೆ.

ಧ್ಯಾನ ಕಸ್ತೂರಿಯು ಕರ್ನಾಟಕದ ಧ್ಯಾನಿಗಳ ಸ್ವಾಧ್ಯಾಯಕ್ಕಾಗಿ ಹಲವಾರು ಕುತೂಹಲಕರ ಲೇಖನಗಳು ಮತ್ತು ಶಿರಶೀರ್ಷಿಕೆಗಳ ಅಡಿಯಲ್ಲಿ ಧ್ಯಾನ ಮತ್ತು ಆಧ್ಯಾತ್ಮಿಕ ಸಾಹಿತ್ಯವನ್ನು ಸಂಕ್ಷಿಪ್ತವಾಗಿ ಒದಗಿಸುತ್ತಿದೆ. ಪತ್ರೀಜಿಯವರು ತಿಳಿಸಿರುವ 'ಆಹಾರ ವ್ಯವಹಾರ' ಈ ಸಂಚಿಕೆಯ ಪ್ರಧಾನ ಲೇಖನವಾಗಿ ಮೂಡಿಬಂದಿದೆ. ಅಲ್ಲದೆ, ಈ ಸಂಚಿಕೆಯಲ್ಲಿ, ಖ್ಯಾತ ಆಧ್ಯಾತ್ಮಿಕ ವಿಜ್ಞಾನಿ ಟಾರ್ಕಾಮ್ ಸರಾಯ್ ಡೇರಿಯನ್‌ರವರು ಅಭಿಪ್ರಾಯಗಳು ಪ್ರಕಟಗೊಂಡಿವೆ. ವಿದೇಶೀ ಮಾಸ್ಟರ್‌ಗಳು ಸಹ 'ಅರಿವಿನೊಂದಿಗೆ ಶ್ವಾಸದ ಜೊತೆಯಲ್ಲಿಯೇ ಇರಿ, ಅಷ್ಟೇ ಸಾಕು' ಎನ್ನುತ್ತಾರೆ. ಗತಜನ್ಮಕ್ಕೆ ತೆರಳುವ ಮೂಲಕ ಚಿಕಿತ್ಸೆ ನೀಡುವ ಖ್ಯಾತ ವೈದ್ಯ ಡಾ.ನ್ಯೂಟನ್‌ರವರ ಸಂದರ್ಶನ, ಪಿರಮಿಡ್ ವ್ಯಾಲಿಗೆ ಪತ್ರೀಜಿಯವರ ಮಾಸಿಕ ಭೇಟಿ ಕುರಿತ ಮತ್ತು ಧ್ಯಾನ ಪ್ರಚಾರ ಕುರಿತ ಚಟುವಟಿಕೆಗಳ ವರದಿಗಳು ಇಲ್ಲಿವೆ. ಹಾಗೂ, ಎಲ್ಲಾ ಶಿರಶೀರ್ಷಿಕೆಗಳೊಂದಿಗೆ ಕುತೂಹಲಭರಿತ ಲೇಖನಗಳ ಸಹಿತ ಈ ಸಮೃದ್ಧ ಸಂಚಿಕೆ ನಿಮ್ಮ ಕೈಯಲ್ಲಿದೆ.

ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಪರಿಷತ್‌ನ ಕಾರ್ಯಚಟುವಟಿಕೆಗಳು ವಿಸ್ತಾರಗೊಳ್ಳುತ್ತಿವೆ. ಈ ಕುರಿತು ಹಲವು ವರದಿಗಳು ಇಲ್ಲಿವೆ. ಪತ್ರೀಜಿಯವರೊಂದಿಗೆ ಧ್ಯಾನಿಗಳ ಹಿಮಾಲಯ ಧ್ಯಾನ ಯಾತ್ರೆ ಯಶಸ್ವಿಯಾಗಿ ನಡೆದಿದೆ. ಈ ಯಾತ್ರೆಯಲ್ಲಿ ಭಾಗವಹಿಸಿದ ಧ್ಯಾನಿಗಳ ಧ್ಯಾನಾನುಭವಗಳು ಅತ್ಯದ್ಭುತವಾಗಿವೆ. ಪಿರಮಿಡ್ ವ್ಯಾಲಿಯಲ್ಲಿ ನಿರಂತರವಾಗಿ ಕಾರ್ಯಶಿಬಿರಗಳು ಮತ್ತು ಆಧ್ಯಾತ್ಮಿಕ ಚಟುವಟಿಕೆಗಳು ನಡೆಯುತ್ತಿವೆ. ಕಳೆದ ವರ್ಷದಿಂದ ಆರಂಭಗೊಂಡಿರುವ, ಆಧ್ಯಾತ್ಮಿಕ ವಿಜ್ಞಾನಿಗಳ ಜಾಗತಿಕ ಸಮ್ಮೇಳನವು, ಈ ಬಾರಿ, ಅಕ್ಟೋಬರ್ 2ರಿಂದ 5ರವರೆಗೆ ಪಿರಮಿಡ್ ವ್ಯಾಲಿಯಲ್ಲಿ ನಡೆಯಲಿದೆ ಎಂಬುದು ಅತ್ಯಂತ ಹರ್ಷದಾಯಕ ವಿಚಾರವಾಗಿದೆ. ''ಆಧ್ಯಾತ್ಮಿಕ ಕ್ರಾಂತಿಯಿಂದ ಭೂಮಿಯ ವಿಕಾಸ '' **(EARTH EVOLUTION THROUGH SPIRITUAL REVOLUTION)** ಎಂಬುದು ಈ ಸಮ್ಮೇಳನದ ಧ್ಯೇಯವಾಕ್ಯವಾಗಿದೆ. ಜಗತಿನಾದ್ಯಂತ ಆಧ್ಯಾತ್ಮಿಕ ವಿಜ್ಞಾನಿಗಳು ಈ ಸಮ್ಮೇಳನದಲ್ಲಿ ಭಾಗವಹಿಸಲಿದ್ದಾರೆ. ಆಧ್ಯಾತ್ಮಿಕ ಜ್ಞಾನ ಪಿಪಾಸುಗಳಿಗೆ ಈ ಸಮ್ಮೇಳನವು ರಸದೌತಣವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ವಂದನೆಗಳು.


ಎ.ಸತ್ಯನಾರಾಯಣ

ವಿಳಾಸ: ನಂ.958, 2ಜಿ ಕ್ರಾಸ್, 1ನೇ ಬ್ಲಾಕ್

ಹೆಚ್.ಆರ್.ಬಿ.ಆರ್. ಬಡಾವಣೆ

ಕಲ್ಯಾಣನಗರ, ಬೆಂಗಳೂರು 560 043

ದೂ: 080-25427145, 9448883872

**ಇ-ಮೇಲ್: sathyasan@gmail.com**


## ನಮ್ಮ ಆಶಯಗಳು

ಪ್ರಿಯ ಧ್ಯಾನಿಗಳೆ,

ಬೆಂಗಳೂರು ಪಿರಮಿಡ್ ಸ್ಪಿರಿಚ್ಯುವಲ್ ಸೊಸೈಟಿ ಎನ್ನುವುದು ಈಗ 'ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್' ಎನ್ನುವ ಹೊಸ ಹೆಸರಿನಿಂದ ಅವತರಿಸಿದೆ. ಉದ್ದೇಶಿತ ಧ್ಯಾನ ಪ್ರಚಾರ ಕಾರ್ಯಕ್ರಮಗಳನ್ನು ಉತ್ತಮವಾಗಿ ನಿರ್ವಹಿಸುವ ಅನುಕೂಲಕ್ಕಾಗಿ ಇಡೀ ರಾಜ್ಯಕ್ಕೆ ಅನ್ವಯಿಸುವಂತೆ ಹಲವಾರು ಮಾರ್ಪಾಡುಗಳೊಂದಿಗೆ ಬ್ರಹ್ಮರ್ಷಿ ಪತ್ರೀಜಿ ಅವರ ಆದೇಶಾನುಸಾರ ಈ ಟ್ರಸ್ಟನ್ನು ಹೊಸದಾಗಿ ರೂಪಿಸಲಾಯಿತು.

ಧ್ಯಾನ ಪ್ರಚಾರವನ್ನು ಕರ್ನಾಟಕ ರಾಜ್ಯದಾದ್ಯಂತ ಕ್ರಮಬದ್ಧವಾಗಿ ಉತ್ತಮ ರೀತಿಯಲ್ಲಿ ಕೈಗೊಳ್ಳಬೇಕಾಗಿದೆ. ರಾಜ್ಯದ ಎಲ್ಲಾ ತಾಲೂಕು ಅಥವಾ ಜಿಲ್ಲಾ ಕೇಂದ್ರಗಳಲ್ಲಿ ಈ ಟ್ರಸ್ಟ್‌ನ ಶಾಖೆಗಳನ್ನು ಆರಂಭಿಸಲಾಗುವುದು. ಧ್ಯಾನಿಗಳು ಅವರವರ ಪ್ರದೇಶಗಳಲ್ಲಿ ಇದರ ಕಛೇರಿಗಳು ಸ್ಥಾಪಿಸಲು ಅವಕಾಶವನ್ನು ಕಲ್ಪಿಸಲಾಗಿದೆ. ಉತ್ಸುಕರಾದ ಧ್ಯಾನಿಗಳು ತಮ್ಮ ತಮ್ಮ ಪ್ರದೇಶಗಳಲ್ಲಿ ಆಯಾ ಗ್ರಾಮ/ಪಟ್ಟಣದ ಹೆಸರಿನ ಮೇಲೆ ತಮ್ಮದಾದ ಈ ಟ್ರಸ್ಟ್‌ನ ಶಾಖೆಯನ್ನು ಪ್ರಾರಂಭಿಸಬಹುದು. ಇದಕ್ಕಾಗಿ, ಬೇಕಾದ ಮಾಹಿತಿಯನ್ನು ಕೇಂದ್ರ ಕಚೇರಿಯಿಂದ ಪಡೆಯಬಹುದು. ತಮ್ಮ ಬಂಧು,ಬಾಂಧವರು, ಸ್ನೇಹಿತರು, ಸಹೋದ್ಯೋಗಿಗಳು ಹೀಗೆ, ಎಲ್ಲರನ್ನು ಈ ಟ್ರಸ್ಟ್‌ನ ಸದಸ್ಯರನ್ನಾಗಿ ಮಾಡಬೇಕು. ಅವರ ವಿಳಾಸಗಳು ಮತ್ತಿತರ ವಿವರಗಳು ಕಚೇರಿಯಲ್ಲಿ ದಾಖಲಾಗುವುದು ಅತಿ ಮುಖ್ಯವಾದುದು. ಸಮಯ ವ್ಯರ್ಥಗೊಳಿಸದೆ ಕೆಲಸ ನಿರ್ವಹಿಸುವುದು ಈಗ ಅಗತ್ಯವಾಗಿದೆ.

ಧ್ಯಾನಕಸ್ತೂರಿ ಈಗ ಉನ್ನತಮಟ್ಟದಲ್ಲಿ ಸುಂದರವಾಗಿ ಹೊರಬರುತ್ತಿದೆ. ಅಪಾರವಾದ ಧ್ಯಾನವಿಜ್ಞಾನ ಸಮಾಚಾರವಲ್ಲದೆ, ಎಲ್ಲಾ ರೀತಿಯ ಹೊಸ ಹೊಸದಾದ ಆಸಕ್ತಿಕರ ವಿಚಾರಗಳನ್ನು ನಿಮಗಾಗಿ ಈ ಪತ್ರಿಕೆ ಸಕಾಲದಲ್ಲಿ ನಿಮ್ಮ ಕೈಗೆ ತಲುಪಿಸುತ್ತದೆ. ನಾವುಗಳು ಸಬ್ಸ್ಕ್ರೈಬರಾಗಲೇಬೇಕು. ಓದಲೇಬೇಕು. ನಮ್ಮ ಮುಖಾಂತರ ಮತ್ತೊಬ್ಬರು ಸಬ್ಸ್ಕ್ರೈಬರಾಗಲೇಬೇಕು. ಧ್ಯಾನ ಕಸ್ತೂರಿಯನ್ನು ಓದಲೇ ಬೇಕು. ಧ್ಯಾನ ಕಸ್ತೂರಿ ಮಾಸ ಪತ್ರಿಕೆ ಯನ್ನು ಸಹ ಎಲ್ಲರೂ ಪ್ರೋತ್ಸಾಹಿಸುವ ಮೂಲಕ ಅದರ ಸದಸ್ಯರ ಸಂಖ್ಯೆ ಹೆಚ್ಚಾಗಲು ಬೇಕಾದ ಕ್ರಮವನ್ನು ಕೈಗೊಳ್ಳಬೇಕು. ಕರ್ನಾಟಕದ ಮನೆ ಮನೆಗೂ ಒಬ್ಬ ಧ್ಯಾನ ಕಸ್ತೂರಿ ಸದಸ್ಯ ಇರಬೇಕು. ಮನೆ ಮನೆಯೂ ಬ್ರಹ್ಮರ್ಷಿ ಪತ್ರೀಜಿಯವರ ಸತ್ಯವಾಕ್ಕುಗಳ ಜ್ಞಾನ ಪ್ರಕಾಶದ ಜೊತೆ ಬೆಳಗುತ್ತಾ, ಧ್ಯಾನ ಕಸ್ತೂರಿಯ ಪರಿಮಳ ಸಹಿತ ಧ್ಯಾನಮಯವಾಗಬೇಕು.

ಅದ್ಭುತವಾದ ಮೆಗಾ ಪಿರಮಿಡ್ ಈಗ ಸರ್ವಾಂಗಸುಂದರವಾಗಿ ಬೆಂಗಳೂರಿನ ಬೆಳಕಾಗಿದೆ. ಆದರೂ, ರಾಜ್ಯದಲ್ಲಿ ಎಷ್ಟೋ ಜನ ಇನ್ನೂ ಈ ಪಿರಮಿಡ್ ದರ್ಶನ ಭಾಗ್ಯವಿಲ್ಲದೇ ಇದ್ದಾರೆ. ಧ್ಯಾನಿಗಳೆಲ್ಲರಿಗೂ ಈ ಮೆಗಾಪಿರಮಿಡ್‌ನ್ನು ಸಂದರ್ಶಿಸುವಂತೆ ಆಯಾ ಪ್ರದೇಶಗಳ ಪಿರಮಿಡ್ ಮಾಸ್ಟರುಗಳು ಪ್ರಯತ್ನಿಸುವುದು ಅತಿ ಮುಖ್ಯ. ನಮ್ಮ ಕಚೇರಿಯ ಸಹಾಯವೆಂದೂ ಇರುತ್ತದೆ. ಪಿರಮಿಡ್ ವ್ಯಾಲಿಯಲ್ಲಿ ಹಲವಾರು ಸೌಲಭ್ಯಗಳು ಇವೆ. ಉಚಿತ ಅನ್ನದಾನ ಸಹ ಇದೆ. ಪತ್ರೀಜೀ ಅವರು ಪ್ರತಿ ತಿಂಗಳ ಮೊದಲ ಮೂರು ದಿವಸ ಪಿರಮಿಡ್ ವ್ಯಾಲಿಯಲ್ಲಿರುವುದು ತಿಳಿದಿರುವ ವಿಷಯವೇ. ಖಚಿತವಾಗಿ ಇನ್ನುಮೇಲೆ ಎಲ್ಲರೂ ಪಿರಮಿಡ್ ವ್ಯಾಲೀ-ಬೆಂಗಳೂರು ಚಲೋ ಎನ್ನುವುದು ಎಲ್ಲರ ಮುಂದಿರುವ ತಕ್ಷಣದ ಕರ್ತವ್ಯವಾಗಬೇಕು.


ಬಿ.ಶಿವರಾಮಪ್ಪ, ಕಾರ್ಯದರ್ಶಿ,

ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್, ಬೆಂಗಳೂರು

 

# ಆನಾಪಾನಸತಿ ಧ್ಯಾನ





ಧ್ಯಾನದ ವಿಧಾನ : ಸುಖಾಸನದಲ್ಲಿ ಹಾಯಾಗಿ ಕುಳಿತುಕೊಂಡು, ಎರಡೂ ಕೈ ಬೆರಳುಗಳನ್ನು ಪರಸ್ಪರ ಜೋಡಿಸಿಕೊಂಡು, ಕಣ್ಣೆರಡೂ ಮುಚ್ಚಿ ಸಹಜವಾಗಿ ನಡೆಯುತ್ತಿರುವ ಉಸಿರಾಟವನ್ನು ಗಮನಿಸುತ್ತಿರಬೇಕು. ಯಾವ ಮಂತ್ರ, ಜಪ ಅಥವಾ ನಾಮಸ್ಮರಣೆ ಇರಬಾರದು. ಯಾವ ದೈವೀಕಲ್ಪನೆಗಳು ಅಗತ್ಯವಿಲ್ಲ, ಸಹಜವಾಗಿಯೇ ನಡೆಯುತ್ತಿರುವ ಉಸಿರಾಟವನ್ನು ಆಹ್ಲಾದದಿಂದ ಗಮನಿಸುತ್ತಿರಿ ಅಷ್ಟೆ. ಸಹಜವಾದ ಉಸಿರಾಟದ ಮೇಲೆಯೇ ಗಮನವಿಡುತ್ತಿದ್ದರೆ, ಕ್ರಮೇಣ ಆಲೋಚನಾ ರಹಿತ ಸ್ಥಿತಿ ಉಂಟಾಗುತ್ತದೆ. ಇದೇ ಧ್ಯಾನ ಸ್ಥಿತಿ. ಈ ಧ್ಯಾನ ಸ್ಥಿತಿಯಲ್ಲಿ ಅಪಾರವಾದ ವಿಶ್ವಮಯ ಪ್ರಾಣಶಕ್ತಿ (ಕಾಸ್ಮಿಕ್ ಎನರ್ಜಿ) ಶರೀರದಲ್ಲಿ ಪ್ರವೇಶಿಸಿ, ನಾಡಿಮಂಡಲ ಶುದ್ಧಿಯಾಗಿ ಅದ್ಭುತವಾದ ಆರೋಗ್ಯ ದೊರಕುತ್ತದೆ. ಪ್ರತಿದಿನ ನಿಯಮಬದ್ಧವಾಗಿ ಧ್ಯಾನ ಮಾಡುವುದರಿಂದ, ದೇಹದಲ್ಲಿ ವಿಶ್ವಪ್ರಾಣಶಕ್ತಿಯ ಮಟ್ಟ ಹೆಚ್ಚಿ ಸುಪ್ತಚೇತನಗಳು ಜಾಗೃತಿಯಾಗುತ್ತವೆ. ಕ್ರಮೇಣ ದಿವ್ಯಚಕ್ಷು ಉತ್ತೇಜನಗೊಳ್ಳುತ್ತದೆ. ಪಿರಮಿಡ್ ಶಕ್ತಿ ಲಭ್ಯವಿದ್ದೆಡೆ, ಪಿರಮಿಡ್‌ಗಳನ್ನು ಬಳಸಿ ಧ್ಯಾನ ಮಾಡಿ, ಧ್ಯಾನ ಸ್ಥಿತಿ ಬೇಗ ಬರುತ್ತದೆ; ಧ್ಯಾನ ಶಕ್ತಿ ಅಪಾರವಾಗಿ ಹೆಚ್ಚುತ್ತದೆ.

## ಧ್ಯಾನದ ಲಾಭಗಳು

- ★ ಸಂಪೂರ್ಣ ಆರೋಗ್ಯ
- ★ ನೆನಪಿನ ಶಕ್ತಿ ವೃದ್ಧಿ
- ★ ಮೂರನೇ ಕಣ್ಣು ಉತ್ತೇಜನ
- ★ ಆತ್ಮ ವಿಶ್ವಾಸ
- ★ ಬುದ್ಧಿ ಸೂಕ್ಷ್ಮತೆ
- ★ ಜೀವನದ ಗುರಿಯ ಸ್ಪಷ್ಟತೆ
- ★ ಆಧ್ಯಾತ್ಮಿಕ ಜ್ಞಾನ
- ★ ಏಕಾಗ್ರತೆಯ ಶಕ್ತಿ
- ★ ಮಾನಸಿಕ ಶಾಂತಿ

# ಏಕತಾ ಧ್ಯಾನ

''ಏಕತಾ ಧ್ಯಾನ'' ಎಂಬುದು ಒಂದು ''ಸಾಮೂಹಿಕ ಧ್ಯಾನ ಗೋಷ್ಠಿ''. ನಾವು ಎಲ್ಲಿದ್ದರೆ ಅಲ್ಲೇ. ಒಂದೇ ಸಮಯದಲ್ಲಿ ಎಲ್ಲರೂ ಕುಳಿತು ಮಾಡುವ ಧ್ಯಾನವು ಎಲ್ಲರನ್ನೂ ಒಗ್ಗೂಡಿಸುತ್ತದೆ.

## "ಪ್ರತಿ ಭಾನುವಾರ ಬೆಳಗ್ಗೆ 6 ಗಂಟೆಯಿಂದ 7 ಗಂಟೆಯವರೆಗೆ"

ಒಂದು ಗಂಟೆಯ ಸಮಯವನ್ನು ಈ ಶ್ರೇಷ್ಠ 'ಏಕತಾ ಸಂಪರ್ಕ'ಕ್ಕಾಗಿ ಆಯ್ಕೆ ಮಾಡಲಾಗಿದೆ.
ಇದು ಜೂನ್1, 2008 ರಿಂದ ಆರಂಭಗೊಂಡು ಡಿಸೆಂಬರ್ 2012ರ ಅಂತ್ಯಕ್ಕೆ ಕೊನೆಗೊಳ್ಳುತ್ತದೆ.
ಶ್ರೇಷ್ಠ ಏಕತಾ ಭಾವದೊಂದಿಗೆ ''ಧ್ಯಾನ ಜಗತ್''ನ್ನು ಸಾಧಿಸೋಣ

## 2012ರ ಹೊತ್ತಿಗೆ ಇಡೀ ಜಗತ್ತನ್ನು ಆಧ್ಯಾತ್ಮೀಕರಿಸೋಣ !

''ಏಕತಾ ಧ್ಯಾನ ಯೋಜನೆ''ಯು ಇಡೀ ಜಗತ್ತಿನಾದ್ಯಂತ ವಿಸ್ತರಿಸಲೇಬೇಕು. ವಿಶ್ವಪ್ರಜ್ಞೆ ಮತ್ತು ಜಗತ್ತಿನ ಸಮನ್ವಯವನ್ನು ಸಾಧ್ಯವಾದಷ್ಟು ಶೀಘ್ರವಾಗಿ ಜಗತ್ತಿನಾದ್ಯಂತ ಹರಡಿಸುವ ಘನ ಉದ್ದೇಶಕ್ಕಾಗಿ ನಾವೆಲ್ಲರೂ ಶ್ರಮಿಸೋಣ.
ಇಡೀ ಅಸ್ತಿತ್ವದ ಜೊತೆಯಲ್ಲಿ, ನೀವೂ ಸಹ ಇರುವಿರಿ ಎಂದು ನೀವು ಭಾವಿಸಿದರೆ,
ಈ ಏಕತಾ ಧ್ಯಾನದಲ್ಲಿ ನೀವೂ ಸಹ ಒಬ್ಬ ಅಭ್ಯರ್ಥಿಯೇ ಹೌದು !

*'' ನಿಮ್ಮ ಉಸಿರಿನೊಂದಿಗೇ ಇರಿ ''*

# ಕಾಣದ ಕೈಗಳು

## Torkom Saraydarian

ಟಾರ್ಕಾಮ್ ಸರಾಯ್‌ಡೇರಿಯನ್ ಒಬ್ಬ ಮಹಾನ್ ಆಧ್ಯಾತ್ಮಿಕ ವಿಜ್ಞಾನಿ. ಲೆಕ್ಕವಿಲ್ಲದಷ್ಟು ಜನರಿಗೆ ಸತ್ಯದ ಮಾರ್ಗವನ್ನು ತೋರಿಸಿಕೊಟ್ಟ ಮಹನೀಯರು. ಮನುಷ್ಯ ತಾನೇ ನಿರ್ಮಿಸಿಕೊಂಡ ಬಂಧನಗಳಲ್ಲಿ ಸಿಲುಕಿ ತನ್ನ ಸ್ವಂತ ಪರಿಚಯವಿಲ್ಲದೆ, ತನ್ನ ನಿಜವಾದ ಸ್ವರೂಪ, ಶಕ್ತಿ ಸಾಮರ್ಥ್ಯಗಳನ್ನು ತಿಳಿಯದೆ, ಕಂಗಾಲಾಗಿರುವಾಗ ಟಾರ್ಕಾಮ್ ರಂತಹ ಆತ್ಮಜ್ಞಾನಿಗಳ ಮಾತುಗಳು ನಮ್ಮನ್ನು ಎಚ್ಚರಗೊಳಿಸುತ್ತವೆ. ಈ ವಿಶ್ವವೆಂಬ ಮಾಯಾಸಾಗರದಲ್ಲಿ ನಮ್ಮ ಇರುವಿಕೆಯ ಹಿಂದೆ ಒಂದು ಮಹತ್ತರವಾದ ಪ್ರಣಾಳಿಕೆ ಇದೆ ಎಂದು ಅರಿವಾಗುತ್ತದೆ. ಸಹಜವಾಗಿಯೇ ಉಂಟಾಗುವ ಈ ಮೌಢ್ಯವನ್ನು ತೊಲಗಿಸಿ ಜನರನ್ನು ಈ ಮಾಯೆಯಿಂದ ಜಾಗೃತಗೊಳಿಸುವುದಕ್ಕೆ ಟಾರ್ಕಾಮ್‌ರವರು ವಿಶ್ವಕ್ಕೆ ಮಾಡುತ್ತಿರುವ ಸೇವೆ, ಬನ್ನಿ ಟಾರ್ಕಾಮ್‌ರನ್ನು ಮಾತಾಡಿಸಿ, ಅವರದೇ ಆದ ಸ್ವಂತ ಭಾವನೆಗಳನ್ನು ತಿಳಿದುಕೊಳ್ಳೋಣ.



ಟಾರ್ಕಾಮ್ ಸರಾಯ್‌ಡೇರಿಯನ್

### ಸೇವೆ

"ಬಹಳಷ್ಟು ಮಂದಿ ತಮ್ಮ ಪತ್ರಗಳ ಮೂಲಕ ನನಗೆ ಕೃತಜ್ಞತೆಗಳನ್ನು ತಿಳಿಸುತ್ತಾರೆ. ಕನಸುಗಳಲ್ಲಿ ನಾನು ನೀಡಿದ ಸಂದೇಶಗಳಿಂದ ಹಾಗೂ ಮಾರ್ಗದರ್ಶನದಿಂದ ಅವರಿಗೆ ಬಹಳ ಖುಷಿ ಸಿಕ್ಕಿದೆ. ಸ್ವಪ್ನಲೋಕದಲ್ಲಿ ಅವರಿಗುಂಟಾದ ಅನುಭವಗಳು ಅವರದ್ದೆ ಹೊರತು ನನ್ನದೇನು ಇಲ್ಲ. ನಿಜ ಸಂಗತಿ ಏನೆಂದರೆ, ಅನುಭವವು ಅನುಭವ ಹೊಂದಿದ ವ್ಯಕ್ತಿಗೆ ಸ್ವಂತ ವಿಚಾರವಾಗುತ್ತದೆ ಹೊರತು ಅದರಲ್ಲಿ ನನ್ನ ಸ್ವಂತಿಕೆ ಏನೂ ಇಲ್ಲ, ಆಸಕ್ತಿಯೂ ಇಲ್ಲ, ನಾನು ಮಾಡುವ ಸೇವೆ ಹಾಗೂ ನೀಡುವ ತರಬೇತಿ ಮಾತ್ರ ನನ್ನದು. ಮತ್ತೇನೂ ಇಲ್ಲ. ನನ್ನನ್ನು ಪ್ರೀತಿಸುವ ಜನರಿಗೆ ಹೆಚ್ಚಾಗಿ ನೀಡುವುದು ಅಥವಾ ದ್ವೇಷಿಸುವವರಿಗೆ ಕಡಿಮೆ ಗಮನಿಸುವುದು ನನ್ನಿಂದಾಗದು. ಮಾಯೆಯ ತೆರೆಯನ್ನು ಸರಿಸುವುದೊಂದೇ ನನ್ನ ಕೆಲಸ. ಅದೇ ನನ್ನ ಸೇವೆ. ಈ ಕೆಲಸದಲ್ಲಿ ವ್ಯಕ್ತಿಗತವಾದ ವಿಚಾರಗಳು, ವಿಷಯಗಳಿಗೆ ಅವಕಾಶ ಇಲ್ಲದೇ ಇಲ್ಲ".

ನಿಮ್ಮ ಕನಸಿನ ವಿಚಾರದಲ್ಲಿ ನನ್ನ ಪಾಲುದಾರಿಕೆ ಇರಲು ಸಾಧ್ಯವೇ ಇಲ್ಲ, ಕೆಲವು ಕ್ಷುದ್ರ ಶಕ್ತಿಗಳು ನನ್ನ ಚಿತ್ರವನ್ನು ಉಪಯೋಗಿಸಿ ತಮ್ಮದೇ ಆದ ಮಾರ್ಗಗಳನ್ನು ಅನಿಸಿಕೆಗಳನ್ನು ಸ್ವಪ್ನದಲ್ಲಿ ತೋರಿಸುವ ಸಾಧ್ಯತೆ ಇದೆ. ಆ ಕ್ಷುದ್ರ ಶಕ್ತಿಗಳು ತಿಳಿಸುವ ಸಂದೇಶಗಳು ನಿಮಗೆ ನಿಜವೆನಿಸಿ ನೀವು ಅದನ್ನು ಒಪ್ಪಿದಲ್ಲಿ ಅವು ತಮ್ಮ ದುಷ್ಕೃತ್ಯಗಳನ್ನು ಶುರುಮಾಡಿ ಧ್ವಂಸ ಮಾಡುತ್ತವೆ, ಎಚ್ಚರಿಕೆ!

ನಾನು ಮಾಯೆಯನ್ನು ಹೋಗಲಾಡಿಸಲು ಶ್ರಮಿಸುವವನೇ ಹೊರತು, ನಿಮ್ಮಲ್ಲಿ ಮತ್ತಷ್ಟು ವಿಚಾರಗಳನ್ನು ತುಂಬಿಸಲು ನನಗಾವ ಅಧಿಕಾರವೂ ಇಲ್ಲ.

ಕೆಲವೊಮ್ಮೆ ಸೌರದೇವತೆಗಳು ನನ್ನ ಚಿತ್ರದ ಮೂಲಕ ಜನರಿಗೆ ಒಳ್ಳೆಯ ಸಂದೇಶಗಳನ್ನು ನೀಡುವ ಸಾಧ್ಯತೆ ಇದೆ. ಆಗಲೂ ಕೂಡ ಅದರಲ್ಲಿ ನನ್ನ ಕೈವಾಡವಿರುವುದಿಲ್ಲ, ಅದರ ಒಳಿತು, ಕೆಡುಕುಗಳಿಗೆ ಅವರೇ ಜವಾಬ್ದಾರರು.

### ಅದೃಶ್ಯ ಸಹಾಯಕರು

ಹಲವು ಬಾರಿ ಜನರು ನನಗೆ ವಂದನೆಗಳನ್ನು ಸಲ್ಲಿಸುತ್ತಾರೆ ನಾನು ಅವರನ್ನು ಸ್ವಪ್ನದಲ್ಲಿ ವೈಯಕ್ತಿಕವಾಗಿ ಯಾವುದೋ ಬೇರೆ ಲೋಕಗಳಿಗೆ ಕರೆದೊಯ್ದು ಮಹಾ ಚೈತನ್ಯದೊಂದಿಗೆ ಒಂದುಗೂಡಿಸಿದೆನೆಂದು ಅವರಿಗೆ ನನ್ನ ಉಪನ್ಯಾಸಗಳಿಗೆ ಆಮಂತ್ರಣ ಕೊಟ್ಟು, ಸಮಯ. ದಿನಾಂಕ, ವಿಳಾಸ ತಿಳಿಸಿದೆನೆಂದು, ಇನ್ನೂ ಏನೇನೋ ಹೇಳಿ ನನ್ನನ್ನು ಅಭಿನಂದಿಸುತ್ತಾರೆ.

ಈ ರೀತಿ ಮಾಡಲು ಸಾಧ್ಯವೆ ಇಲ್ಲ, ಅಷ್ಟು ಶಕ್ತಿ ನನಗಿಲ್ಲ.

ಅವರು ಮಾಡುವ ಪ್ರಶಂಸೆಗಳಿಗೆ ನಾನು ಹಿಗ್ಗುವುದೇ ಇಲ್ಲ. ಆದರೆ, ಒಂದನ್ನು ಮಾತ್ರ ಖಚಿತವಾಗಿ ಹೇಳಬಲ್ಲೆ. ನಮ್ಮ ಕಣ್ಣಿಗೆ ಕಾಣಿಸಿಕೊಳ್ಳದೆ ಇರುವ ಹಲವಾರು ಅದೃಶ್ಯ ಸಹಾಯಕರಿದ್ದಾರೆ. ನಮಗೆ ಒಳ್ಳೆಯದಾಗುವುದಕ್ಕೆಂದು ಅವರು ಹೀಗೆ ಮಾಡುವುದುಂಟು, ನಾವು ಅವರಿಗೆ ಕೃತಜ್ಞತೆ ಸಲ್ಲಿಸಬೇಕಾದರೆ, ಒಂದೇ ಒಂದು ದಾರಿಯಿದೆ. ನಾವು ಮಾಯೆಯಲ್ಲಿ ಸಿಲುಕದೆ ಇರುವುದೇ ಅವರಿಗೆ ಸಲ್ಲಿಸಬೇಕಾದ ಕೃತಜ್ಞತೆ. ನನ್ನನ್ನು ಜ್ಞಾನದ ಪ್ರಸಾರಕ್ಕೆ ಬೇಕಾದ ಮಾಧ್ಯಮ ಎಂದು ದಯವಿಟ್ಟು ಎಣಿಸಬೇಡಿರಿ. ನನ್ನ ಸ್ವಧರ್ಮದಲ್ಲಿ ಸ್ವಾತಿಕೆಯಿಂದ ಪ್ರಜ್ಞೆಯ ಪದರಗಳಂಚಿಗೆ ಹೋಗಿ, ಜ್ಞಾನ, ತಿಳುವಳಿಕೆ ಹಾಗೂ ಗುರಿಯನ್ನು ಮುಟ್ಟಲು ಬೇಕಾದ ಉಪಾಯಗಳ ಸರಮಾಲೆಯನ್ನೇ ತರಲು ಸಿದ್ಧನಿರುವ ಒಬ್ಬ ಮನುಷ್ಯ ಮಾತ್ರ ನಾನು.

"ವೇದ ಉಪನಿಷತ್ತುಗಳು, ಭಗವದ್ಗೀತೆ, ಪುರಾಣಗಳು ಇನ್ನು ಹಲವಾರು ವಿಷಯಗಳನ್ನು ನಾನು ಬಲ್ಲೆ. ಇಷ್ಟೊಂದು ಜ್ಞಾನವನ್ನು ಭೋಧಿಸುವ ಗ್ರಂಥಗಳನ್ನು ಓದಿದರೂ, ನಾನೆಂದೂ ಅವುಗಳನ್ನು ಆಧಾರವಾಗಿ ತೆಗೆದುಕೊಂಡಿಲ್ಲ, ನನ್ನ ಸ್ವಾತಿಕೆಯೇ ಬೇರೆ. ಇಂತಹ ಗ್ರಂಥಗಳನ್ನು ಅವಲಂಬಿಸಿ ನನ್ನ ವಿಸ್ತಾರವನ್ನು ನಾನೆಂದೂ ಮಿತಿಗೊಳಿಸಿಕೊಂಡಿಲ್ಲ". ನಾನು ನಾನೇ.

"ನಾನು ಹೇಳಿಕೊಡುವ ಪಾಠಗಳು ಬಲು ಸರಳ ಹಾಗು ಸ್ಪಷ್ಟ. ಇದನ್ನು ಕಲಿಯಲು ಬಲು ಸುಲಭ ಎಂದು ಸಾವಿರಾರು ಜನರು ನನಗೆ ಪತ್ರದ ಮುಖೇನ ಅಭಿನಂದಿಸಿದ್ದಾರೆ".

ನಾನೊಬ್ಬ ಸಂಗೀತ ಪ್ರೇಮಿ, ಅದರಲ್ಲಿ ಪರಿಪೂರ್ಣತೆಯನ್ನು ಸಾಧಿಸಿದ್ದೇನೆ. ಏಳು ಸಂಗೀತ ವಾದ್ಯಗಳನ್ನು ನುಡಿಸಬಲ್ಲೆ. ನನ್ನ ಸಂಗೀತದಲ್ಲಿ ವಿಶೇಷವಾದ ಭಾವನೆ ಇದೆ.

## ನನ್ನ ತತ್ವ ಬೋಧನೆ

ನನ್ನ ಸಿದ್ಧಾಂತಗಳು ಪ್ರಪಂಚದ ಎಲ್ಲೆಡೆ ಹರಡುವುದೆಂಬ ಧೃಢ ನಂಬಿಕೆ ನನಗಿದೆ. ಅಸಂಖ್ಯಾತ ಗುಂಪುಗಳು ನಿರ್ಮಾಣಗೊಂಡು ಹಲವಾರು ಭಾಷೆಗಳಲ್ಲಿ ಇದನ್ನು ಪ್ರಚಾರ ಮಾಡಲಾಗುತ್ತದೆ. ನನ್ನ ತತ್ವಗಳು ಎಲ್ಲಾ ಸತ್ಯಾನ್ವೇಷಣೆಯ ಹಾದಿಗಳನ್ನು ಒಂದುಗೂಡಿಸುವಂತದ್ದಾಗಿದೆ. ಇದನ್ನು ಸಾಧಿಸಲು ಎಷ್ಟೋ ಮಂದಿ ಬೆಂಬಲಿಗರು ನನ್ನ ತತ್ವಗಳನ್ನು ತಮ್ಮದೇ ಆದ ಶೈಲಿಯಲ್ಲಿ ಇನ್ನೂ ಅರ್ಥಗರ್ಭಿತವಾಗಿ ಜನರಿಗೆ ವ್ಯಕ್ತಪಡಿಸುತ್ತಿದ್ದಾರೆ.

ಅಸಂಖ್ಯಾತ ಜನರಿಗೆ ಸೇವೆಮಾಡುವುದು ನನ್ನ ಕರ್ತವ್ಯ. ಈ ಜನರ ಮನಸ್ಸಿನ ಬಗ್ಗೆ ನನಗೆ ಚೆನ್ನಾಗಿ ಗೊತ್ತಿದೆ. ಅವರು ಪಡುತ್ತಿರುವ ನೋವುಗಳು ಹಾಗೂ ಅದನ್ನು ನಿವಾರಿಸಿ ಜೀವನದಲ್ಲಿ ಆನಂದವನ್ನು ತುಂಬಿ, ಅವರನ್ನು ಭವಿಷ್ಯದೆಡೆಗೆ ಕರೆದೊಯ್ಯಬಲ್ಲೆ. ಮುಂಜಾನೆಯ ಮಸುಕಿನಂತೆ ನನ್ನ ಬೋಧನೆಗಳು ಇನ್ನೂ ಮಂಜಿನ ತೆರೆಯಲ್ಲಿಯೇ ಇದೆ. ಈ ತೆರೆಯು ಕರಗಿ ಜ್ಞಾನದ ವಿಕಾಸವಾಗಿ ಪ್ರಜ್ವಲಿಸುವ ಸೂರ್ಯನಂತೆ ವಿಜೃಂಭಿಸುವ ದಿನ ದೂರವಿಲ್ಲ. ನನ್ನ ಕಲಿಕೆಯ ಮೆರುಗು ನನ್ನ ಗುರುಗಳಿಗೆ ಸಲ್ಲುತ್ತದೆ. ಅವರೇ ತಾನೆ ನನ್ನನ್ನು ಪ್ರಜ್ಞೆಯ ಗರ್ಭದಲ್ಲಿ ಮೊಳೆಯಲು ಅವಕಾಶ ನೀಡಿದ್ದು.

## ನನ್ನ ಬರವಣಿಗೆ

• ನಾನು ಬರೆಯುವ ಮುನ್ನ ನನ್ನ ತಲೆ ಹಾಗು ಬೆನ್ನೆಲುಬಿನ ಸುತ್ತಲು ವಿದ್ಯುತ್ ಸಂಚಾರವಾದಂತೆ ಭಾಸವಾಗುತ್ತದೆ. ಇದು ನನ್ನ ಸ್ವಂತ ಇಚ್ಛೆಯಿಂದ ಉಂಟಾಗುವ ಸಂಚಾರವೇ ಹೊರತು ಕೃತಕವಾದುದಲ್ಲ. ನನ್ನ ಪ್ರಜ್ಞಾ ಅವಸ್ಥೆಯನ್ನು ಹೆಚ್ಚಿಸಿಕೊಂಡು ಕೆಲವು ಕ್ಷಣಗಳ ಕಾಲ ಮೌನವಾಗಿರುತ್ತೇನೆ. ಆ ಸಮಯದಲ್ಲಿ ಆಕಾಶದಿಂದ ಕೆಲವು ಕಿರಣಗಳು ನನ್ನ ಸೂಕ್ಷ್ಮ ಶರೀರದಿಂದ ಒಳಗೆ ಹರಿಯುತ್ತದೆ. ಆಗ ನನ್ನ ಮೆದುಳಿನಿಂದ ಹೊರಡುವ ಬೆಳಕಿನ ಬಿಂಬಗಳು ಅಪಾರವಾದ ತಿಳುವಳಿಕೆಯನ್ನು ಉಪಾಯಗಳನ್ನು ದೃಶ್ಯಗಳನ್ನು ಸೆರೆಹಿಡಿದು ನನ್ನ ಸೂಕ್ಷ್ಮಶರೀರದಲ್ಲಿ ಪ್ರತಿಬಿಂಬಿಸುತ್ತವೆ. ಕೆಲವೊಮ್ಮೆ ಇದರ ಪ್ರಸಾರವು ಅದೆಷ್ಟು ಚುರುಕಾಗಿ ಸಂಪತ್ ಭರಿತವಾಗಿ ಇರುತ್ತದೆಂದರೆ, ನಾನು ಅದನೆಲ್ಲ ಕೂಡಲೇ ಬರೆದಿಡುತ್ತೇನೆ, ಇಲ್ಲ ವಾದಲ್ಲಿ ಅವು ನನ್ನಿಂದ ಮರೆಯಾಗುವ ಸಾಧ್ಯತೆ ಇರುತ್ತದೆ. ಅನಂತರ, ನಾನು ಬರೆದಿಟ್ಟ ವಿಚಾರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ನನ್ನ ಬರಹವನ್ನು ಮುಂದುವರಿಸುತ್ತೇನೆ.

ನನ್ನ ಸೂಕ್ಷ್ಮ ಶರೀರವನ್ನು ತಾಕುವ ಕಿರಣಗಳು ನನಗಿಂತಲು ಮೇಲೆ ಇರುವ ಯಾವುದೋ ಒಂದು ಪ್ರಕಾಶಮಾನವಾದ ಬೆಳಕಿನಿಂದ ಬರುತ್ತದೆಂದು ನಾನು ಬಲ್ಲೆ. ಈ ಕಿರಣಗಳು ನನ್ನ ಸೂಕ್ಷ್ಮ ಶರೀರದ ಹಲವಾರು ಭಾಗಗಳ ಮೂಲಕ ಹಾದು ಹೋಗುತ್ತಾ ಸುವ್ಯವಸ್ಥಿತವಾಗಿ ನನ್ನನ್ನು ಈ ವಿಶ್ವದೊಂದಿಗೆ ಒಂದುಗೂಡಿಸುತ್ತದೆ. ಆ ಕ್ಷಣಗಳು ನನಗೆ ಉಲ್ಲಾಸಭರಿತವಾಗಿ ತೋರುತ್ತದೆ.

## ಮಿಂಚಿನಂತಹ ಆಲೋಚನೆಗಳು

ವಿದ್ಯುತ್ ಕಾಂತ ಶಕ್ತಿಯುಳ್ಳ ಯೋಚನೆಗಳ ಮೋಡಗಳ ಜೊತೆ ನನ್ನ ಸಂಪರ್ಕ ಸದಾ ಇದ್ದೇ ಇದೆ. ಇಂತಹ ಮಿಂಚಿನಂತಹ

ಆಲೋಚನೆಗಳು. ಕೆಲವು ಗುರುಗಳಿಂದ ಹೊರಹೊಮ್ಮುತ್ತಿರುತ್ತವೆ. ಕೆಲವೊಮ್ಮೆ ಈ ಆಲೋಚನೆಗಳು ಬಲು ಮೋಹಕವಾಗಿಯೂ ಹಾಗೂ ಅದರ ಸತ್ಯಸಂಧತೆ ನಿರುಪಮವಾಗಿಯೂ ತೋರುತ್ತದೆ. ಆದಕಾರಣ, ಇನ್ನೂ 5 ಸಾವಿರ ವರ್ಷಗಳ ಪರಂಪರೆ ಬೇಕಾಗ ಬಹುದೆಂದು ನನಗನಿಸುತ್ತದೆ. ಕೆಲವೊಮ್ಮೆ ಒಂದೇ ಒಂದು ಜ್ಞಾನದ ಹನಿಯು ಒಂದು ದೊಡ್ಡ ಪುಸ್ತಕ ನಿರ್ಮಾಣಕ್ಕೆ ಆಧಾರವಾಗುತ್ತದೆ.

ನನ್ನ ಸುತ್ತಲು ಆವರಿಸಿರುವ ಬೆಳಕು ಕೆಲವೊಮ್ಮೆ ಬಲು ಮಧುರವಾಗಿಯೂ ತೋರುತ್ತದೆ. ಆದರೆ, ಕೆಲವೊಮ್ಮೆ ಎದೆಗುಂದುವಂತೆ ಅಥವಾ ಸೌಮ್ಯವಾಗಿಯೂ, ಪ್ರಸನ್ನತೆಯಿಂದಲೂ ತೋರುವುದು. ಈ ಬೆಳಕಿಲ್ಲದೆ ನನ್ನ ಕ್ರಿಯಾಶೀಲತೆ ಎಲ್ಲವೂ ನಿರರ್ಥಕವಾಗಿಯೂ ಅಥವಾ ಸಾಮಾನ್ಯ ಮಟ್ಟದ್ದಾಗಿಯೂ ತೋರುತ್ತದೆ. ಬಹಳಷ್ಟು ಜನರನ್ನು ಉದ್ದೇಶಿಸಿ ಮಾತನಾಡುವಾಗ, ಯಾರೋ ನನ್ನನ್ನು ಆವರಿಸಿಕೊಂಡಂತೆ ಅನಿಸುತ್ತದೆ. ಒಮ್ಮೊಮ್ಮೆ ನನ್ನ ಅಂತರಾಳವನ್ನು ದರ್ಶಿಸಿದಾಗ, ಅಪಾರವಾದ ಶಕ್ತಿಯ ಬಿಡುಗಡೆಯಾಗಿ ಎಷ್ಟೋ ತಿಂಗಳುಗಳ ಕಾಲ ಅದು ಹರಿಯುತ್ತಲೇ ಇರುತ್ತದೆ.

## ಸ್ವಶಕ್ತಿ

ನನ್ನ ಈಗಿನ ಅವತಾರದಲ್ಲಿ ನಾನು ತಿಳಿದುಕೊಂಡ ವಿಷಯವೇನೆಂದರೆ, ಜ್ಞಾನಾರ್ಜನೆಗಾಗಿ ಯಾರನ್ನೂ ಅವಲಂಬಿಸ ಬೇಕಾಗಿಲ್ಲ. ನಮ್ಮ ಸ್ವಂತ ದುಡಿಮೆಯಿಂದ ನಮ್ಮ ಅರಿವನ್ನು ವಿಸ್ತಾರಗೊಳಿಸಿ, ನಮ್ಮ ಅಂತರಾಳದ ದೈವೀಶಕ್ತಿಯನ್ನು ಮಾತ್ರ ನಂಬಬೇಕು. ಕೆಲವು ಪ್ರಶ್ನೆಗಳು ನನ್ನ ಮುಂದೆ ಇಡುವ ಮುಂಚೆಯೇ ಅದರ ಪೂರ್ತಿ ಉತ್ತರ ನನ್ನಲ್ಲಿ ಇರುತ್ತದೆ. ಇದು ಹಲವರನ್ನು ಬೆರಗುಗೊಳಿಸಿದೆ. ನಾನು ಆ ಕ್ಷಣಗಳನ್ನು ತುಂಬಾ ಸವಿಯುತ್ತೇನೆ.

ಈ ವಿದ್ಯುತ್ ಕಾಂತ ಶಕ್ತಿಯನ್ನು ಭರಿಸಲು ಅಸಾಧ್ಯವಾದಾಗ ನಾನು ಸಂಗೀತದ ಮೂಲಕ ಒತ್ತಡದಿಂದ ನಿವಾರಣೆ ಹೊಂದುತ್ತೇನೆ. ನನ್ನ ಬರವಣಿಗೆ ಪ್ರಜ್ಞಾವಸ್ಥೆಯ ಕೆಲವು ಹಂತಗಳಲ್ಲಿ ಆದ ಅನುಭವಗಳ ಸಂಗ್ರಹ. ಈ ಪ್ರಪಂಚವು ನನಗೆ ಕೇವಲ ರೂಪು ರೇಖೆಗಳ ಘನ ಪದಾರ್ಥವಲ್ಲ, ಅದು ನನಗೆ ಅರ್ಥಗರ್ಭಿತವಾದ ಶಕ್ತಿಯ ಅಲೆಗಳ ಸಾಗರ.

## ನನ್ನ ಗುರು

ನನ್ನ ಗುರುವು ಈ ಪ್ರಪಂಚದಾದ್ಯಂತ ಪ್ರಯಾಣಿಸುತ್ತಲೇ ಇದ್ದು, ನನ್ನನ್ನು ಸದಾ ಗಮನಿಸುತ್ತಲೇ ಇರುತ್ತಾರೆ. ಬೇಕಾದಾಗಲೆಲ್ಲಾ ನನಗೆ ಶಕ್ತಿ ಚೈತನ್ಯಗಳನ್ನು ಒದಗಿಸುತ್ತಾ ನಾನು ಆಪತ್ತಿನಲ್ಲಿದ್ದಾಗ ತನ್ನ ಹಸ್ತವನ್ನು ನೀಡುತ್ತಲೇ ಇರುತ್ತಾರೆ. ನನ್ನ ಎಷ್ಟೋ ತೊಂದರೆಗಳು ಕ್ಷಣಾರ್ಧದಲ್ಲಿ ಕ್ರಿಯಾಶೀಲತೆಯ ಸಾಗರಕ್ಕೆ ನಾನು ಧುಮುಕುತ್ತೇನೆ.

## ಆನಂದವನ್ನು ಹೆಚ್ಚಿಸುವುದು

ಧೈರ್ಯವಂತರು, ನಿಸ್ವಾರ್ಥಿಗಳು ಹಾಗು ತ್ಯಾಗ ಜೀವಿಗಳನ್ನು ನಾನು ತುಂಬಾ ಅಭಿನಂದಿಸುತ್ತೇನೆ. ನಮ್ಮ ಭವಿಷ್ಯ ಉಜ್ವಲವಾಗಬೇಕಾದರೆ, ಇಂತಹವರ ಅವಶ್ಯಕತೆ ಬಹಳ ಇದೆ. ನಾವು ಇನ್ನೂ ಮಹೋನ್ನತವಾದ ಕಾರ್ಯಗಳನ್ನು ಮಾಡಲು ಹೊರಟಿದ್ದೇವೆ. ಈ ಕೆಲಸದಿಂದ ನಮ್ಮ ಹೃದಯಗಳಿಗೆ ಸಿಗುವ ಆನಂದ ಅಷ್ಟಿಷ್ಟಲ್ಲ.

## ಸೇವೆ ಹಾಗೂ ತ್ಯಾಗ

ನಾನು ಚಿಕ್ಕಂದಿನಿಂದಲು ಯಾರಿಗಾದರೂ ಸಹಾಯ ಮಾಡುವ ವಿಷಯದಲ್ಲಿ ತುಂಬಾ ಆಸಕ್ತಿಯನ್ನು ಹೊಂದುತ್ತಿದ್ದೆ. ನನ್ನ ಸ್ವಂತ ಲಾಭಕ್ಕಾಗಿ ಅಥವಾ ನನ್ನ ಆರ್ಥಿಕ ಭವಿಷ್ಯಕ್ಕಾಗಿ ಎಂದೂ ಯೋಚಿಸಿದವನಲ್ಲ. ಎಷ್ಟೋ ದಿನಗಳು ನನ್ನ ಬಳಿ ಹಣ ಕಡಿಮೆ ಇದ್ದರೂ ಊಟ, ನಿದ್ದೆ, ಬಟ್ಟೆ, ಇರಲು ಮನೆ ಹಾಗೂ ಓಡಾಡಲು ವಾಹನ ಸದಾ ಇತ್ತು. ಭವಿಷ್ಯದಲ್ಲಿ ನಾನು ನೀಡಿರುವ ಬೋಧನೆಗಳನ್ನು ಪುಸ್ತಕಗಳಾಗಿ ಮಾಡಿ ವಿಶ್ವವಿದ್ಯಾಲಯಗಳಲ್ಲಿ ಉಪಯೋಗಿಸುತ್ತಾರೆಂದು ನಂಬಿದ್ದೇನೆ. ಈ ಮೂಲಕ ಜನರು ತಮ್ಮ ಜೀವನದಲ್ಲಿ ಶಾಂತಿ ನೆಮ್ಮದಿಗಳನ್ನು ತುಂಬಿಸಿಕೊಂಡು ತಮ್ಮ ಮನೆ, ದೇಶ ಹಾಗು ಪ್ರಪಂಚವನ್ನು ಸ್ವರ್ಗವಾಗಿಸಬೇಕೆಂದು ಆಶಿಸುತ್ತೇನೆ.

## ಪ್ರಪಂಚವು ಬದಲಾಗುತ್ತಿದೆ

ನಾನೊಬ್ಬನೇ ಇಷ್ಟೊಂದು ಮಾಡಿರುವಾಗ ನೀವೆಲ್ಲರೂ ಒಂದಾಗಿ 100 ಪಟ್ಟು ಹೆಚ್ಚು ಮಾಡಬಲ್ಲಿರಿ. ನಾನು ನೀಡಿರುವ ಬೋಧನೆಗಳೆಲ್ಲವೂ ಸಾಲ ಎಂದು ಭಾವಿಸಿ, ಅದನ್ನು ಉಪಯೋಗಿಸಿ ಅದರಿಂದ ಅಪಾರವಾದ ಜ್ಞಾನವನ್ನು ಸಂಪಾದಿಸಿ ಐಶ್ವರ್ಯವನ್ನು ಉತ್ಪತ್ತಿ ಮಾಡಬೇಕಾಗಿದೆ. ಜನರಲ್ಲಿ ವಿವೇಚನಾ ಶಕ್ತಿಯು ಎಚ್ಚರಗೊಂಡಿದೆ. ಇಲ್ಲಿಯ ತನಕ ಅವರಿಗೆ ಹೇಳಿಕೊಟ್ಟ ಮೂಢನಂಬಿಕೆಗಳನ್ನು ಖಂಡಿಸಿ ಸತ್ಯವನ್ನು ಬೋಧಿಸುವ ಗುರುಗಳನ್ನು ಬಯಸುತ್ತಾರೆ. ನಮಗೆ ಸಹಾಯ ಮಾಡಲು ದೈವವು ಸದಾ ಸಿದ್ಧವಿರುತ್ತದೆ. ಅದರಲ್ಲಿ ನಂಬಿಕೆ ಇಡಿ. ನೀವು ತಿಳಿಯಬೇಕಾದ ಸತ್ಯವೇನೆಂದರೆ, ಮಹೋನ್ನತವಾದ ಉದ್ದೇಶಗಳನ್ನು, ಚಿಂತನೆಗಳನ್ನು ಬೆಳೆಸಿಕೊಂಡಷ್ಟೂ ನೀವು ದೈವಕ್ಕೆ ಹತ್ತಿರವಾಗುತ್ತೀರಿ.

ಅನುವಾದ : ಶ್ರೀನಿವಾಸ ನಿರ್ಮಲ

ಬೆಂಗಳೂರು



ಏಟ್‌ಹಾರ್ಟ್ ಟೋಲೇ

# ನಿಮ್ಮ ಶ್ವಾಸದ ಜೊತೆ ಅರಿವಿನಿಂದ ಇರಿ-ಸಾಕು!



I♥Breathe



ಏಟ್‌ಹಾರ್ಟ್ ಟೋಲೇ

ಈ ವರ್ಷ ನನ್ನ ಸ್ನೇಹಿತನೊಬ್ಬನು ಒಂದು ದೊಡ್ಡ ಆಧ್ಯಾತ್ಮಿಕ ಸಂಸ್ಥೆಗೆ ಸಂಬಂಧಪಟ್ಟ ವಾರ್ಷಿಕ ಪ್ರಕಟಣಾ ಪತ್ರಿಕೆಯನ್ನು ತಂದುಕೊಟ್ಟನು.. ಆ ಪತ್ರಿಕೆಯನ್ನು ಓದುತ್ತಾ...ಅದರಲ್ಲಿ ಅನೇಕಾನೇಕ ಆಧ್ಯಾತ್ಮಿಕ ಅಂಶಗಳ ಮೇಲೆ ವಿವಿಧ ಬೋಧನೆಗಳು, ಶಿಕ್ಷಣ ಶಿಬಿರಗಳನ್ನು ಕುರಿತು ವಿವರಗಳನ್ನು ಮೆಚ್ಚಿಕೊಳ್ಳದೇ ಇರದೆ ಹೋದೆನು. ಒಂದೇಸಾರಿಗೆ ನನಗೆ ಸಾವಿರಾರು ಅಡುಗೆಗಳನ್ನು ಭಾರಿ ಪ್ರಮಾಣದಲ್ಲಿ ಏರ್ಪಾಟು ಮಾಡಿ, ನಮ್ಮ ಇಷ್ಟಕ್ಕೆ ಆರಿಸಿಕೊಳ್ಳಲಿಕ್ಕಾಗಿಯೇ ಆರೆಂಜ್ ಮಾಡಿಟ್ಟಿರುವ ಬಫೆ ತರಹ ಸಕಲವೂ ಸಿಗುವಂತಿರುವ ರುಚಿಯಾದ ಮೃಷ್ಟಾನ್ನ ಬೋಜನ ನೆನಪಿಗೆ ಬಂತು. "ಪ್ರತಿಸಾರಿ, ಸಾಧ್ಯವಾದಷ್ಟು ಸಮಯ ನಮ್ಮ ಸಹಜ ಶ್ವಾಸ ಪ್ರಕ್ರಿಯೆಯ ಜೊತೆ ಸೇರಿ ಇದ್ದರೆ ಸಾಕು! ಎಂಬುದು ನೆನಪಿಗೆ ಬಂತು. ಒಂದು ವರ್ಷ ಹೀಗೆ ಮಾಡಿ ನೋಡಿ...ನೀವು ಹೇಳುತ್ತಿರುವ ಎಲ್ಲಾ ಪದ್ಧತಿಗಳಿಗಿಂತ ನಿಸ್ಸಂದೇಹವಾಗಿ ಅತಿ ಹೆಚ್ಚಾಗಿ ಪರಿಣಾಮ, ಬದಲಾವಣೆ ನಿಮ್ಮಲ್ಲಿ ಸಂಭವಿಸಿರುತ್ತದೆ. ಮೇಲಾಗಿ ಇದು ಪೂರ್ತಿಯಾಗಿ ಉಚಿತ ಕೂಡ".

ಶ್ವಾಸ ಪ್ರಕ್ರಿಯೆಯನ್ನು ಗಮನಿಸುತ್ತಾ ಇರುವ ಆ ಸಮಯದಲ್ಲಿ ಸಹಜವಾಗಿಯೇ ಆಲೋಚನೆಗಳು ಸ್ವಲ್ಪ ದೂರವಾಗಿ ನಮ್ಮ ಮನಸ್ಸಿನಲ್ಲಿ ಸ್ವಲ್ಪ ಖಾಲಿ ಪ್ರದೇಶ (ಆಕಾಶ) ಸೃಷ್ಟಿಸಲ್ಪಡುತ್ತದೆ...ಇದು ನಮ್ಮಲ್ಲಿರುವ ಚೈತನ್ಯವನ್ನು ಬೆಳೆಸುವ ಒಂದು ಅದ್ಭುತವಾದ ಪದ್ಧತಿ!

## ನಿಮ್ಮ ಶ್ವಾಸದ ಜೊತೆ ನೀವು ಅರಿವಿನಿಂದಿರಿ

ಉಚ್ಛ್ವಾಸ, ನಿಶ್ವಾಸಗಳ ಸ್ಪಂದನೆಗಳನ್ನು ಜಾಗ್ರತೆಯಾಗಿ ಗಮನಿಸಿರಿ. ಒಳಗೆ ಹೋಗುವ ಗಾಳಿ, ಹೊರಗೆ ಬರುತ್ತಿರುವ ಗಾಳಿ ಅಂದರೆ, ಉಸಿರಿನ ಒಡನಾಟವನ್ನು ಪರೀಕ್ಷಿಸಿ ನೋಡಿ. ಒಂದು ಅರಿವಿನಿಂದ ಕೂಡಿದ ಶ್ವಾಸ ಸಾಕು...ಒಂದು ಆಲೋಚನೆಯಿಂದ ಮತ್ತೊಂದು ಆಲೋಚನೆಯ ಮಧ್ಯೆ ಸ್ವಲ್ಪ ಖಾಲಿ ಜಾಗವನ್ನು ಅತ್ಯದ್ಭುತವಾಗಿ ಆವಿಷ್ಕರಿಸುತ್ತದೆ.

ಶ್ವಾಸ ಅನ್ನುವುದು ನಾವು ತಿಳಿದು ಮಾಡುವ ಕ್ರಿಯೆ ಅಲ್ಲ, ಆದ್ದರಿಂದ, ಎಂತಹ ತೊಂದರೆ (ಪ್ರಯಾಸ)ಇಲ್ಲದೆ ನಾವು ನಿಮಿತ್ತ ಮಾತ್ರವಾಗಿ, ಸಾಕ್ಷೀಭೂತವಾಗಿ ಗಮನಿಸಲಾಗುವ ಒಂದು ದಿವ್ಯ ಪ್ರಕ್ರಿಯೆ. ಪುನಃ ಪುನಃ ಮನನ ಮಾಡೋಣ... 'ಶ್ವಾಸ' ತನಗೆ ತಾನೇ ನಡೆಯುತ್ತಿರುವ ನಮ್ಮಲ್ಲಿರುವ ನಿಗೂಢ ಪ್ರಕ್ರಿಯೆ!

ನಮ್ಮ ಅಂತರಾಳದಲ್ಲಿ ಬುದ್ಧಿ ಜರುಗಿಸುವ ಪ್ರಕ್ರಿಯೆ ಇದು. ನಾವು ಮಾಡಬೇಕಾದ್ದೆಲ್ಲಾ ಜರುಗುತ್ತಿರುವುದನ್ನು ಲಯ ಬದ್ಧವಾಗಿ ಗಮನಿಸುವುದೇ ಆಗಿದೆ. ಯಾವುದೇ ಶ್ರಮ, ಪ್ರಯತ್ನದ ಅವಶ್ಯಕತೆ ಇಲ್ಲ. ನಿಶ್ವಾಸಕ್ಕೂ ಮೇಲೆ ಉಚ್ಛ್ವಾಸಕ್ಕೂ ಮಧ್ಯೆ ಇರುವ ಆ ಸ್ವಲ್ಪ ಶೂನ್ಯತೆಯನ್ನು ಜಾಗ್ರತೆಯಾಗಿ ನೋಡೋಣ ಬನ್ನಿ! 'ಶ್ವಾಸ' ತಾನಾಗಿ ರೂಪರಹಿತವಾದದ್ದು, ಆದ್ದರಿಂದ, ಪ್ರಾಚೀನ ಕಾಲದಿಂದಲೂ ಶ್ವಾಸ ಆತ್ಮರೂಪಕ್ಕೆ ಪ್ರತಿಬಿಂಬವಾಗಿ ವರ್ಣಿಸಲ್ಪಟ್ಟಿದೆ... ಶ್ವಾಸ ಸಾಕ್ಷಾತ್ ಏಕತ್ವರೂಪವಾದ ಪ್ರಾಣವೇ! ಭೂಮಿಯಿಂದ ಶೇಖರಿಸಿದ ಧೂಳಿನಿಂದ ಭಗವಂತ ಮನುಷ್ಯರೂಪವನ್ನು ತಯಾರು ಮಾಡಿ, ಮೂಗಿನ ರಂಧ್ರದಲ್ಲಿ ತನ್ನನ್ನೇ, ಪ್ರಾಣ ಚೈತನ್ಯವನ್ನು ಶ್ವಾಸವಾಗಿ ತುಂಬಿದ್ದಾನೆ...ಅಷ್ಟೇ! ಆಗ ಆ ಮನುಷ್ಯ ರೂಪವೇ ಸಜೀವವಾದ ಮಾನವನ್ನಾಗಿ ಪ್ರಕಾಶಿಸಿದೆ.

**ಜೆನಿಸಿಸ್ 2:7**

ಜರ್ಮನಿಯಲ್ಲಿ ಶ್ವಾಸಕ್ಕೆ ಪರ್ಯಾಯ ಪದವಾದ 'ಆತ್ಮನ್', ಪ್ರಾಚೀನ ಭಾರತ ಸಂಸ್ಕೃತ ಪದವಾದ 'ಆತ್ಮನ್' ಆಧಾರವಾಗಿ ರೂಪಹೊಂದಿದುದೇ! ಅಂತರಂಗದಲ್ಲಿ ಜೀವವಾಗಿ ಪ್ರವಹಿಸುತ್ತಿರುವ ಆ ಮೂಲ ಚೈತನ್ಯ ಭಗವತ್ ಸ್ವರೂಪವೇ 'ಆತ್ಮನ್' ಆಗಿ ವರ್ಣಿಸಲಾಗಿದೆ.

ಶ್ವಾಸಕ್ಕೆ ರೂಪ ಲಕ್ಷಣಗಳು ಇಲ್ಲದೇ ಇದ್ದುದರಿಂದ, ಶ್ವಾಸವನ್ನು ಗಮನಿಸುವುದು ಅನ್ನುವ ಪದ್ಧತಿ...ಮಹಾ ಶೂನ್ಯತೆಯನ್ನು ಆವಿಷ್ಕರಿಸುವುದಕ್ಕೆ ಅತ್ಯಂತ ಅನುಕೂಲವಾದ, ಸಮರ್ಥಕವಾದ ಮಾರ್ಗವಾಗಿ ವಿರಾಜಿಸುತ್ತಿದೆ. ಮಿತಿ, ಪರಿಮಿತಿ ಇಲ್ಲದ ವಸ್ತುವಾಗಿರುವುದರಿಂದ, ಶ್ವಾಸ

ಅತ್ಯದ್ಭುತವಾದ ಧ್ಯಾನ ಕ್ರಿಯೆಯಾಗಿ ವಿರಾಜಿಸುತ್ತಿದೆ.

ಎಷ್ಟು ನಿಗೂಢವಾಗಿರುತ್ತದೋ, ಕ್ಲಿಷ್ಟವಾಗಿರುವುದೋ...ಅಷ್ಟು ಪ್ರಾಮುಖ್ಯತೆ ಇಲ್ಲದೆ ಇರುವ ಹಾಗೆ ಕಾಣಿಸುವ ಈ ಶ್ವಾಸ ಪ್ರಕ್ರಿಯೆ...ಎಷ್ಟೋ ಗಮ್ಮತ್ತಾಗಿ, ಅತ್ಯಂತ ಸುನಾಯಾಸವಾಗಿ ನಮಗೆ ಅತ್ಯುನ್ನತ ಆನಂದಾನುಭೂತಿಗಳನ್ನು ನೀಡುವ ವರವಾಗಿದೆ.

ಶ್ವಾಸದ ಲಯವನ್ನು ಅರಿವಿನಿಂದ ಗಮನಿಸಿದರೆ...ಸಂಪೂರ್ಣ ಅಂತರಂಗದ ಪರಿಣಾಮವನ್ನು ನೀಡಲಾಗುವ ವರ್ತಮಾನದಲ್ಲಿ ಜೀವಿಸುವ ಸಾಮರ್ಥ್ಯವು ನಮ್ಮ ಸ್ವಂತದ್ದಾಗಿರುತ್ತದೆ.

ಶ್ವಾಸವನ್ನು ಅರಿವಿನಿಂದ ಗಮನಿಸುವ ಪ್ರತಿಬಾರಿಯೂ ನಾವು ತಪ್ಪದೇ ವಾಸ್ತವದಲ್ಲಿ, ವರ್ತಮಾನದಲ್ಲಿ ಇರುತ್ತಾ ಇರುತ್ತೇವೆ! ಕ್ರಮವಾಗಿ ನಾವು ಎಷ್ಟು ವರ್ತಮಾನ ಅನುಭವಗಳಲ್ಲಿ ಜಾರಿಹೋಗುತ್ತೇವೆಂದರೆ, ನಾವು ಶ್ವಾಸವನ್ನು ಗಮನಿಸುತ್ತಿದ್ದೇವೆಂಬುವ ವಿಷಯವನ್ನು ಸಹಿತ ಮರೆತು ಹೋಗುವಷ್ಟು...!

ಶ್ವಾಸವನ್ನು ಗಮನಿಸುವ ಪ್ರಕ್ರಿಯೆ ಚಿತ್ತವೃತ್ತಿಗಳನ್ನು ನಿರೋಧಿಸುತ್ತದೆ. ಆದರೆ, ಇಲ್ಲಿ ಆ ಮನೋವಿನ್ಯಾಸ ನಿಶ್ಚಲತ್ವ ನಿದ್ದೆಯಲ್ಲೋ, ಅಚೇತನವಾಗಿಯೋ ಆಗುತ್ತಿಲ್ಲ...ಪೂರ್ತಿ ಎಚ್ಚರಿಕೆ ಸ್ಥಿತಿಯಲ್ಲಿ, ಅರಿವಿನಿಂದ ಇರುವಾಗಲೇ ಆಗುತ್ತದೆ. ನಿಜವಾಗಿಯೂ ಎಂತಹ ವಿಶೇಷ! ನಾವು ಇಲ್ಲಿ ಆಲೋಚನೆಗಳ ಆಳದಲ್ಲಿ ಮುಳುಗಿಹೋಗುತ್ತಿಲ್ಲ, ಸಂಕಲ್ಪಗಳ ಅಲೆಗಳ ಮೇಲೆ ತೇಲುತ್ತಿದ್ದೇವಲ್ಲವೇ! ಸರಿಯಾಗಿ ನೀವು ಗಮನಿಸಲಾದರೆ, ಪರಿಪೂರ್ಣವಾಗಿ ವರ್ತಮಾನವನ್ನು ಆಸ್ವಾದಿಸಲ್ಪಡುವುದು, ಚೈತನ್ಯ ಸ್ಥಿತಿಯಲ್ಲೇ ಆಲೋಚನಾರಹಿತ ಸ್ಥಿತಿಯನ್ನು ಹೊಂದಲಾಗುವುದು ಎಂಬುವುದು ನಮ್ಮ "ಪೂರ್ಣ ಸ್ಥಿತಿ" ಎಂಬುವ ನಾಣ್ಯಕ್ಕೆ ಇರುವ ಎರಡು ಮುಖಗಳೇ ಹೊರತು ವಿರುದ್ಧಭಾವನೆಗಳಲ್ಲ. ಇವು ನಮ್ಮಲ್ಲಿರುವ ಮಹಾಶೂನ್ಯ ಚೈತನ್ಯವನ್ನು ಆವಿಷ್ಕರಿಸುವ ದಿವ್ಯ ಕುಸುಮಗಳು!

'ಎ ನ್ಯೂ ಅರ್ಥ್'ನಿಂದ
ಕನ್ನಡಕ್ಕೆ : ಪುಷ್ಪಾ ಮೋಹನ್




## ಕರ್ನಾಟಕ ಪಿರಮಿಡ್ ಟೂರ್ಸ್ & ಟ್ರಾವೆಲ್ಸ್
## ಧ್ಯಾನ ವಿಜ್ಞಾನ ವಿಹಾರ ಯಾತ್ರೆ ಸಮಾಚಾರ



ಸೃಷ್ಟಿಕ್ರಮದ ಆಶ್ಚರ್ಯಗೊಳಿಸುವ ಮತ್ತು ವಿಜ್ಞಾನದಾಯಕ ಹೆಸರಾಂತ ದಿವ್ಯ ಪ್ರದೇಶಪ್ರಾಂತಗಳ ವಿಶೇಷಜ್ಞಾನವು ಕೂಡ ಆಧ್ಯಾತ್ಮೋನ್ನತಿಗೆ ಅತ್ಯಾವಶ್ಯಕವೆನ್ನುವುದು ಹೇಳಬೇಕಿಲ್ಲ. ಈ ದಿಶೆಕಡೆ ಗಮನ ಇಟ್ಟು ಈಗ ಕೆಳಗಿನ ಧ್ಯಾನ ವಿಹಾರ ಯಾತ್ರೆಗಳನ್ನು ಮೇಲ್ಕಂಡ ಸಂಸ್ಥೆಯಿಂದ ಆಯೋಜಿಸಲು ನಿರ್ಧರಿಸಲಾಗಿದೆ. ಯಾತ್ರೆಗಳ ವಿವರಗಳು ಹೀಗಿವೆ.

1. ಬೆಂಗಳೂರಿನಿಂದ ಚಿತ್ರದುರ್ಗ : 24-10-09 ರಿಂದ 25-10-09 - ದುರ್ಗದ ಸಂದರ್ಶನ ಮತ್ತು ಧ್ಯಾನ ಕಾರ್ಯಕ್ರಮ
2. ವಿಶಾಖ-ವೈಶಾಲಿ ಯಾತ್ರೆ : ಜನವರಿ 2010 ಮಾಸಾಂತ್ಯದಲ್ಲಿ, ವಿವರಗಳು ಮತ್ತೊಮ್ಮೆ.
3. ಬೆಂಗಳೂರುನಿಂದ ಪಾಂಡಿಚೇರಿ : ಪಾಂಡಿಚೇರಿ ದರ್ಶನ, ಸಮುದ್ರತೀರ ವಿಹಾರ, ಅರವಿಂದ ಆಶ್ರಮ ಸಂದರ್ಶನ ಮತ್ತು ಪ್ರತ್ಯೇಕ ಧ್ಯಾನ ಕಾರ್ಯಕ್ರಮ. ವಿವರಗಳು ಮತ್ತೊಮ್ಮೆ.

**ಸಂಪರ್ಕಿಸಬೇಕಾದ ದೂರವಾಣಿ ಸಂಖ್ಯೆ : 9342266199, 9449000696**

ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್
#126, 2ನೇ ಮಹಡಿ, 4ನೇ ಬ್ಲಾಕ್, ಜಯನಗರ, ಬೆಂಗಳೂರು 560011
ಫೋನ್ : 080-26646899

# ಬಿಗ್ ಜಾಯ್ – ಗ್ರೇಟೆಸ್ಟ್ ಜಾಯ್



## ಡಾ. ನ್ಯೂಟನ್‌ರವರ ಇಂಟರ್‌ವ್ಯೂ

ಡಾ. ನ್ಯೂಟನ್ 1991 ಕರ್ನೂಲು ಮೊಟ್ಟಮೊದಲನೆಯ ಬ್ಯಾಚ್‌ನಲ್ಲಿ ಪಿರಮಿಡ್ ಮಾಸ್ಟರ್ ಆದರು ಬ್ರಹ್ಮರ್ಷಿ ಪತ್ರೀಜಿಯವರನ್ನು ಕುರಿತು ಬಹಳಷ್ಟು ವಿಶೇಷಗಳನ್ನು ತಿಳಿಸಿದರು. ಅವರ ಹೃದಯದೊಳಗೆ ಪತ್ರೀ ಸಾರ್ ಬಗ್ಗೆ ಎಷ್ಟೋ ಒಳ್ಳೆಯ ಭಾವನೆಗಳು. ಬ್ರಹ್ಮರ್ಷಿಯವರ ಕೋಪ, ಅಭಿನಂದನೆಗಳು, ಬೈಗುಳಗಳು, ಪ್ರಶಂಸೆಗಳು... ಹೀಗೆ ಎಷ್ಟೆಷ್ಟೋ ವಿಶೇಷಗಳು, ವಿಶಿಷ್ಟಜ್ಞಾನಗಳನ್ನು ಈ ಇಂಟರ್‌ವ್ಯೂನಲ್ಲಿವೆ. ವಿನಮ್ರಭಾವನೆಯಿಂದ ಕೂಲ್ ಆಗಿ, ಒಳ್ಳೆಯ ನಗು, ಅಂದವಾದ ಆಕರ್ಷಿತವಾಗುವಂತಹ ರೂಪ, ಭಾಷಾಪ್ರವೀಣತೆ ಶೈಲಿ, ಆನಂದ, ಯಾವ ಸ್ವಲ್ಪವೂ ತಡವರಿಸದೆ ಆತ್ಮದೊಳಗಿನಿಂದ ಹೊಮ್ಮುವ ಜ್ಞಾನ ಪ್ರವಾಹ, ಪತ್ರೀಜಿಯವರ ಕುರಿತು ಕೃತಜ್ಞತಾಭಾವ, ತನ್ನ ಸ್ನೇಹಿತರ ಜೊತೆ ಸ್ನೇಹಪರತೆ, ಒಂದು ಗುಣ ನಿಧಿ, Master of wisdom, Master of gratitude, ಇವು ಈ ಮಹನೀಯರ ಲಕ್ಷಣಗಳು. ಪಿರಮಿಡ್ ಸ್ಪಿರಿಚುಯಲ್ ಸೊಸೈಟೀಸ್ ಮೂವ್‌ಮೆಂಟ್‌ನಲ್ಲಿ ಪತ್ರೀಜಿಯವರ ಕಾರ್ಯವೈಖರಿಗಳಲ್ಲಿ ಮಿರಾಕುಲಸ್ ಆಗಿ ಆಚರಣೆ ತೋರಿಸುವ ಮಾಸ್ಟರ್ ಡಾ. ನ್ಯೂಟನ್ 'ಧ್ಯಾನ ಕಸ್ತೂರಿ' ಓದುಗರಿಗೋಸ್ಕರ ಧ್ಯಾನಾಂಧ್ರಪ್ರದೇಶ್ ಪತ್ರಿಕೆಯಿಂದ ದಿಂದ!

-ಸಂಪಾದಕೀಯ ತಂಡ

**ಮಾರಂ ಶಿವಪ್ರಸಾದ್:**

ನ್ಯೂಟನ್ ರವರೆ, ನಿಮ್ಮ ಅಪಾಯಿಂಟ್ಮೆಂಟ್ ದೊರಕಿದ್ದು ಮಾಸ್ಟರ್ ದ್ವಾರಕಾನಾಥ್ ರವರ ನಂತರ, ನಿಮ್ಮನ್ನು ಇಂಟರ್ ವ್ಯೂ ಮಾಡುವುದು ನನಗೆ ಬಹಳ ಆನಂದವನ್ನು ನೀಡುತ್ತದೆ. ಥ್ಯಾಂಕ್ ಯು ಸಾರ್!



**ಡಾಕ್ಟರ್ ನ್ಯೂಟನ್:**

ವೆಲ್‌ಕಂ ಸಾರ್, ನೀವು ಮಾಡುವ ಇಂಟರ್‌ವ್ಯೂಗಳನ್ನು ನಾನು ರೆಗ್ಯುಲರ್ ಆಗಿ ಓದುತ್ತಿದ್ದೇನೆ. I Really Congratulate you ! ಪಿರಮಿಡ್ ಮಾಸ್ಟರ್‌ಗಳನ್ನು ನೀವು ಮೂಲೆ ಮೂಲೆಯಲ್ಲೂ ಹುಡುಕುತ್ತಿದ್ದೀರಾ! ರವಿ ಕಾಣದನ್ನು ಕವಿ ಕಂಡ ಎನ್ನುವ ಕನ್ನಡ ನಾಣ್ಣುಡಿಯು ನೆನಪಿಗೆ ಬರುತ್ತಿದೆ ನನಗೆ.

**ಮಾರಂ ಶಿವಪ್ರಸಾದ್:**

ಥ್ಯಾಂಕ್ ಯು ಸಾರ್! ನಾವೀಗ ನಿಮ್ಮ ಸಂದರ್ಶನವನ್ನು ಪ್ರಾರಂಭಿಸೋಣ, ಸತ್ಯವೆಂದರೆ ಏನು? ವಿವರವಾಗಿ ತಿಳಿಸಿ.

**ಡಾಕ್ಟರ್ ನ್ಯೂಟನ್:**

ನಮ್ಮಲ್ಲಿ ಇಲ್ಲದೇ ಇರುವ ಏನನ್ನೂ, ನಮ್ಮ ಎದುರಿನಲ್ಲಿರುವ ಮನುಷ್ಯರಲ್ಲಿ ನೋಡಲಾಗುವುದಿಲ್ಲ . ಸತ್ಯವು ನಮ್ಮಲ್ಲೇ ಇದ್ದರೂ ನಮ್ಮಲ್ಲಿ ಆ ಅನುಭವ ಬರದಿದ್ದರೆ, ಆ ತಿಳುವಳಿಕೆ ಬರದಿದ್ದರೆ, ಪತ್ರೀಜಿಯವರಲ್ಲಿ ಕೂಡ ನಮಗೆ ಸತ್ಯ ಕಾಣುವುದಿಲ್ಲ. ಅನುಭವಕ್ಕೆ ಬಂದ ನಂತರವೇ ಸತ್ಯವು ನಮಗೆ ಅರ್ಥವಾಗುತ್ತದೆ. ಅದು ನಮ್ಮಲ್ಲಿಯೇ ಇದೆ. ಆದರೆ ಯಾವುದು ನಮ್ಮಲ್ಲಿದೆಯೋ, ಅದು ಹೊರಗೆ ಬಂದು ನಮಗೆ ಅರ್ಥವಾದಾಗ, ಅದನ್ನು ಆಚರಿಸಿದಾಗ ಅದೇ ಸತ್ಯ. ದಟ್ ಈಜ್ ದಿ ಟ್ರೂತ್, ದಟ್ ಈಜ್ ದಿ ಒನ್ನೆಸ್.

ಆ ಒನ್ನೆಸ್‌ನಲ್ಲಿ ಹೋದ ನಂತರವೇ ನಾನು ನೀವು ಎಲ್ಲರೂ ಒಂದೇ ಎನಿಸುತ್ತದೆ. ನೀವು ಇದುವರೆಗೂ ಹೇಳಿದ್ದೀರಲ್ಲಾ - "ನಾನು ಇಂಟರ್‌ವ್ಯೂ ಮಾಡಿದ ಮೇಲೆ ಆರ್ಟಿಕಲ್ ಬರೆಯಲು ಕುಳಿತರೆ, ಇಂಟರ್‌ವ್ಯೂ ಕೊಟ್ಟವರು ಅವರ ಇಂಟರ್‌ವ್ಯೂನಲ್ಲಿ ಯಾರ ಕುರಿತು ಹೇಳುತ್ತಿದ್ದಾರೋ ಅವರು, ಅವರ ಕಾನ್ಷಿಯಸ್‌ನೆಸ್‌ನಲ್ಲಿ ಎಂಟರ್ ಆಗಿ ಬಹಳ ಪರ್‌ಫೆಕ್ಟ್ ಆಗಿ, ಕ್ರಮ ಪದ್ಧತಿಯಲ್ಲಿ ಬರೆಯುತ್ತಾರೆ ". ಇಂಟರ್‌ವ್ಯೂನಲ್ಲಿ ಏನಾದರೂ ಪಾಯಿಂಟ್ ವ್ಯತ್ಯಾಸವಾದರೆ, ಹೇಳಿದವರ ಕಾನ್ಷಿಯಸ್‌ನಿಂದ ಆ ಬ್ಯಾಲನ್ಸ್ ಮ್ಯಾಟರ್ ಪೂರ್ತಿಯಾಗುತ್ತದೆ ಎಂದು ಯಾವಾಗ ನಾವು ರಿಯಲೈಜ್ ಹೊಂದಿ ಒನ್ನೆಸ್‌ನಲ್ಲಿ ಹೋಗುತ್ತೇವೆಯೋ ಆಗ ಶರೀರವು ಬೇರೆ ಅಷ್ಟೆ! One Soul, one Heart! ಅದು oneness ಅಂದರೆ, ಅದೇ Truth! ಆ Truth ನಿಂದಲೇ ನೀವು ಬರೆಯುತ್ತಿದ್ದೀರಾ?



**ಮಾರಂ ಶಿವಪ್ರಸಾದ್:**

ನಿಮಗೆ ಪತ್ರೀಜಿ ಜೊತೆ ಯಾವಾಗ ಹೇಗೆ ಪರಿಚಯವಾಯ್ತು? ಯಾರಿಂದ ಯಾವ ವರ್ಷದಲ್ಲಿ?

**ಡಾಕ್ಟರ್ ನ್ಯೂಟನ್:**

ಅದು 1989 ಡಿಸೆಂಬರ್ ತಿಂಗಳು. ನಮ್ಮ ಸ್ವಂತ ಊರು ನೆಲ್ಲೂರು . ಆದರೆ, ನಾನು ಕರ್ನೂಲ್‌ನಲ್ಲಿ M.B.B.S ಓದುತ್ತಿದ್ದ ನನಗೆ ಹೆಚ್ಚು ಸಿಗರೇಟ್ ಸೇದುವ ಅಭ್ಯಾಸವಿತ್ತು. ಸಿಗರೇಟ್‌ಸೇದಿ,ಅಡಿಕೆ ಪುಡಿ ಬಾಯಿಗೆ ಹಾಕಿಕೊಂಡು, ನನ್ನ ಪಕ್ಕದ ಸೀಟಿನಲ್ಲಿ ಕುಳಿತಿದ್ದ ಪ್ಯಾಸೆಂಜರ್‌ಗೆ ಆಫರ್ ಮಾಡಿದೆ. ಮಾತನಾಡಲು ಅವರ ಜೊತೆ ಪ್ರಾರಂಭಿಸಿದೆ ಆ ಮಾತಿನಲ್ಲಿ 'ಧ್ಯಾನ ' ಕುರಿತು ಪತ್ರೀ ಸಾರ್ ಕುರಿತು ಮಾತು ಬಂದಿತು. ನಾನು ಬಹಳ ಶ್ರದ್ಧೆಯಿಂದ, ಕುತೂಹಲದಿಂದ ಕೇಳಿಸಿಕೊಂಡೆ. ಏಕೆಂದರೆ, ಅಲ್ಲಿಯವರೆಗೆ Spirituality ಬಗ್ಗೆ ಸರಿಯಾದ ಟರ್ನ್‌ಗೋಸ್ಕರ ಹುಡುಕುತ್ತಿದ್ದೆ "ನನಗೆ ಪತ್ರೀಜಿಯವರನ್ನು ತೋರಿಸುತ್ತೀರಾ?" ಎಂದು ಆ ವ್ಯಕ್ತಿಯನ್ನು ಕೇಳಿದೆನು. "ತಪ್ಪದೇ ತೋರಿಸುತ್ತೇನೆ" ಎಂದು ಮರುದಿವಸ ನನ್ನನ್ನು ಪತ್ರೀಸಾರ್ ಬಳಿಗೆ ಕರೆದುಕೊಂಡು ಹೋದರು, ಆ ಮಹಾನುಭಾವರು. ಅವರ ಹೆಸರು 'ಪೆಲಾಲ ರಾಮಾಂಜನೇಯ'. ಕರ್ನೂಲ್ ಷರಾಫ್ ಬಜಾರ್‌ನಲ್ಲಿ ವಾಸವಾಗಿದ್ದರು.

**ಮಾರಂ ಶಿವಪ್ರಸಾದ್:**

ಪತ್ರೀಸಾರ್ ಆಗ ಹೇಗಿದ್ದರು? ಗಡ್ಡ ಬಿಟ್ಟಿದ್ದರಾ? ಪೈಜಾಮಾ, ಲಾಲ್ಚಿ ? ನೀವು ಮೊದಲು ಅವರನ್ನು ಕಂಡಾಗ ನಿಮಗೆ ಏನನ್ನಿಸಿತು? ಪ್ರಶಂಸೆನಾ? ಬೈಗಳಾ?

**ಡಾಕ್ಟರ್ ನ್ಯೂಟನ್:**

(ಗಟ್ಟಿಯಾಗಿ ನಗುತ್ತಾ)ನಾನು ಪತ್ರೀ ಸಾರ್ ಅವರನ್ನು ಕಂಡ ಕೂಡಲೇ ಶಾಕ್ ಆಗಿಬಿಟ್ಟೆನು. "ಒಳ್ಳೆಯ ಗುರು" ಎಂದು ನನ್ನನ್ನು ಶ್ರೀ ರಾಮಾಂಜನೇಯ ಅವರು ಕರೆದುಕೊಂಡು ಬಂದಿದ್ದರು. ಜೀನ್ಸ್ ಪ್ಯಾಂಟ್! ಟೀ ಶರ್ಟ್! ಗಡ್ಡ ಇಲ್ಲ ! ಬೋಡ ತಲೆ! ಕ್ಲೀನಾಗಿ ಶೇವ್ ಮಾಡಿದ್ದರು! ಕೈನಲ್ಲಿ ಸಿಗರೇಟ್! ಪತ್ರೀಜಿ ನನ್ನ ಆಲೋಚನೆಯನ್ನು ಗ್ರಹಿಸಿ ಚೆನ್ನಾಗಿ ಬೈದು ಬಿಟ್ಟರು.

ಗುರು ಎಂದವನು ದೊಡ್ಡ ಬೊಟ್ಟು ಹಣೆಯಲ್ಲಿ ಇಟ್ಟುಕೊಂಡು ಕಾಷಾಯ ವಸ್ತ್ರ ವನ್ನು ಉಟ್ಟುಕೊಂಡು ಇರಬೇಕೆ? ಜೀನ್ಸ್ ಪ್ಯಾಂಟ್, ಟೀ ಶರ್ಟ್ ಹಾಕಿಕೊಂಡಿರಬಾರದಾ? ಎಂದು ಹೀಗೆ ಒಂದು ಅರ್ಧ ಘಂಟೆಯವರೆಗೆ ಚೆನ್ನಾಗಿ ಬೈಸಿಕೊಂಡು ಒಗೆದು ಒಣಗಿಸಿದಂತೆ ಕೆಲಸ ಮಾಡಿದರು. ನನಗೆ ಮತ್ತೆ ಶಾಕ್! ಹಾಗೆಯೇ ಬೈದು ಬೈದು "ನೀನು ಯಾವ ಪುಸ್ತಕವನ್ನು ಓದಿರುವೆ?" ಎಂದರು. ನಾನು 1987ರಲ್ಲಿ ಜೋನಾಥನ್ ಲಿವಿಂಗ್‌ಸ್ಟನ್ ಸೀಗಲ್ ಪುಸ್ತಕವನ್ನು ಓದಿದ್ದೇನೆ. ರಿಚಾರ್ಡ್ ಬಾಕ್ ಬರೆದ ಆ ಪುಸ್ತಕ ನಾನು ಓದಿರುವೆನೆಂದು ತಿಳಿದು, ಅವರು ಎಷ್ಟೋ ಆನಂದ ಪಟ್ಟರು, ಎಷ್ಟೋ ಸಂಭ್ರಮ ಪಟ್ಟರು. ಪ್ರಶಂಸೆಯಲ್ಲಿ ನನ್ನನ್ನು ಮುಗಿಸಿಬಿಟ್ಟರು, ಎಷ್ಟೋ ಆನಂದ ಪಟ್ಟರು, ನನಗೆ ಮತ್ತೆ ಶಾಕ್! ಇಷ್ಟರಲ್ಲೇ ಇವರಲ್ಲಿ ಎಂತಹ ಮಾರ್ಪಾಡು! ಮತ್ತೆ 'ಇನ್ನೂ ಹೇಳು' ಎಂದರು. ಆ ಪುಸ್ತಕವನ್ನು ಓದಿದ ನಂತರ Who am I? What am I? ಎನ್ನುವ ಪ್ರಶ್ನೆಗಳು ನನ್ನಲ್ಲಿ ಅನೇಕ ತರಹ ಮೂಡಿತು. ತಿಳಿದುಕೊಳ್ಳುವುದಕ್ಕೋಸ್ಕರ ಸರಿಯಾದ ಮಾಸ್ಟರ್‌ಗೋಸ್ಕರ ಹುಡುಕುತ್ತಾ ನಿಮ್ಮ ಬಳಿ ಬಂದಿರುವೆನು. ಅತ್ಯಂತ ಅನಿರೀಕ್ಷಿತವಾಗಿದೆ ಎಂದೆನು. ಅವರಿಗೆ ಮತ್ತಷ್ಟು ಸಂತೋಷವಾಯಿತು, ನಾನು ಹೇಳಿದ ಮಾತುಗಳು ಅವರಿಗೆ ಸಂತೋಷವನ್ನುಂಟುಮಾಡಿತು.

ನೀನು ಅನಿರೀಕ್ಷಿತವಾಗಿ ಬರಲಿಲ್ಲ ಸರಿಯಾದ ಸ್ಥಳಕ್ಕೆ ಸರಿಯಾದ ಸಮಯಕ್ಕೆ ಬಂದಿದ್ದೀಯಾ ಎಂದು 'Come on i will tell you something' ಎಂದರು. ಆಗ ಅಲ್ಲಿ ದ್ವಾರಕಾನಾಥ್ ಮಾಸ್ಟರ್, ಫ್ರೆಂಡ್ ಜ್ಞಾನೇಶ್ವರ್ ಅವರೂ ಅಲ್ಲಿದ್ದರು. ಅವರಿಗೆ ಅಶ್ವತ್ಥಾಮನಿಗೆ ಸಂಬಂಧಪಟ್ಟಿರುವ ಅನುಭವ ಸಹ ಇದೆ. ಅವರಿಗೆ ನನ್ನನ್ನು ಧ್ಯಾನಕ್ಕೆ ಕೂಡಿಸಲು ತಿಳಿಸಿದರು. ಅಷ್ಟೇ, ಹಾಗೆಯೇ ಬಹಳ ಹೊತ್ತು ಕುಳಿತುಕೊಂಡೆನು.

ಮುಂದುವರೆಯುವುದು...





# ಪಿರಮಿಡ್ ವ್ಯಾಲಿಯಲ್ಲಿ ಪತ್ರೀಜಿ



ಚಿನ್ನೆ ಧ್ಯಾನಾರ್ಥಿಗಳು

ಈ ಬಾರಿ ಎಂದರೆ, ಆಗಸ್ಟ್ ತಿಂಗಳಲ್ಲಿ ಕೇವಲ 2 ದಿನಗಳಿಗೆ ಮಾತ್ರ ಪತ್ರೀಜಿಯವರ ವ್ಯಾಲಿಯ ಪ್ರವಾಸ ಸೀಮಿತವಾಗಿತ್ತು. ಆದರೂ, ಅಷ್ಟರಲ್ಲಿ ನಮಗೆ ಜ್ಞಾನ ಸಾಗರವನ್ನು ನೀಡಿ ಹೋದರು.

ಪತ್ರೀಜಿ ಅವರು 1ನೇ ತಾರೀಖಿನಂದು ಬೆಳಗಿನ ಜಾವ 3:30 ಕ್ಕೆ ವ್ಯಾಲಿಗೆ ಬಂದರು. ನಂತರ, ಬೆಳಗ್ಗೆ 10:30ಕ್ಕೆ ಪತ್ರೀಜಿ ಅವರ ಜ್ಞಾನ ವಿಚಾರವನ್ನು ತಿಳಿಯಲು ತಮಿಳುನಾಡಿನಿಂದ ಮತ್ತು ಕರ್ನಾಟಕದ ಅನೇಕ ಪ್ರಾಂತ್ಯಗಳಿಂದ ಬಂದಿದ್ದರು.

ಮೊದಲಿಗೆ ತಮಿಳುನಾಡು ಮಾಸ್ಟರ್ ಗಳಿಂದ ಅನುಭವಗಳನ್ನು ಹೇಳಿಸಿದರು, ನಂತರ ಅವರ ಬೋಧನೆಯನ್ನು ನೀಡಿದರು.

### ಪತ್ರೀಸಾರ್ ಮೆಸೇಜ್

★ ರಮಣ ಮಹರ್ಷಿಗಳ ದೇಹ, ಮೂಗು ಒಂದೇ ತರಹ ಇದೆ. ಆದರೆ, ಯಾವ ಮೂಗು ಸರಿ. ಅರವಿಂದರ ಮತ್ತು ವೀರಪ್ಪನ್ ದೇಹ ಒಂದೇ ತರಹ ಇದೆ. ಆದರೆ, ಯಾರ ದೇಹ ಸರಿ. ಆದ್ದರಿಂದ ನಾವು ದೇಹವನ್ನು ನೋಡಬಾರದು. ದೇಹದಲ್ಲಿ ಯಾವ ಲೋಪವಿಲ್ಲ, ಮನಸ್ಸಿನಲ್ಲಿ ಲೋಪ ಇದೆ. ಆದರೆ ರಮಣರ ಮತ್ತು ವೀರಪ್ಪನ್‌ನ ಮನಸ್ಸು (ಚಿತ್ತ)ಒಂದೇ, ಆದರೆ, ರಮಣರ ಚಿತ್ತ ಹೇಗಿದೆ. ವೀರಪ್ಪನ್‌ನ ಚಿತ್ತ ಹೇಗಿದೆ. ನೀನು ಸ್ವಲ್ಪ ದಿವಸ ಕರ್ನಾಟಕದಲ್ಲಿ ಇದ್ದರೆ, ಕನ್ನಡದಲ್ಲಿ ಪರಫೆಕ್ಟ್ ಆಗುತ್ತಿಯ. ಅದೇ ರೀತಿ ನೀನು ನಿನ್ನ ಉಸಿರಾಟದ ಜೊತೆ ಇದ್ದರೆ, ನಿನ್ನ ಮನಸ್ಸು ಪೂರ್ತಿಖಾಲಿಯಾಗುತ್ತದೆ.

"ಜಟಿಲ ಜೀವನ - ಜಟಿಲ ಮನಸ್ಸಿನಿಂದ"
"ಗೊಂದಲ ಜೀವನ - ಗೊಂದಲ ಮನಸ್ಸಿನಿಂದ"
"ಶಕ್ತಿ ಹೀನ ಜೀವನ - ಶಕ್ತಿಹೀನ ಮನಸ್ಸಿನಿಂದ"
"ಜ್ಞಾನೋದಯ ಜೀವನ- ಜ್ಞಾನೋದಯದ ಮನಸ್ಸಿನಿಂದ

★ ಪಿರಮಿಡ್ ವ್ಯಾಲಿಯು ಎನರ್ಜಿಯ ರಿಸರ್ವ್ ಬ್ಯಾಂಕ್. ನೀವು, ಇಲ್ಲಿಗೆ ಬಂದಾಗ ಎನರ್ಜಿಯನ್ನು ದೋಚಿಕೊಂಡು ಹೋಗಬೇಕು. ಹೇಗೆ ಒಂಟೆ ನೀರನ್ನು ಸಂಗ್ರಹ ಮಾಡಿಕೊಂಡು ಬೇಕಾದಾಗ ಉಪಯೋಗಿಸಿಕೊಳ್ಳುತ್ತದೋ ಅದೇ ರೀತಿ ನೀವು ಎನರ್ಜಿಯನ್ನು ದೋಚಿಕೊಳ್ಳಬೇಕು.

ನಂತರ, 30 ನಿಮಿಷಗಳ ಕಾಲ ಬೆಸ್ಮೆಂಟ್‌ನಲ್ಲಿರುವ ಬುದ್ಧನ ವಿಗ್ರಹದ ಮುಂದೆ ಧ್ಯಾನ ಮಾಡಿಸಿದರು. ನಂತರ, ಪಿರಮಿಡ್‌ನಲ್ಲಿ 1 ಗಂಟೆ ತಮ್ಮ ಕೊಳಲುವಾದನದಿಂದ ಎಲ್ಲರನ್ನೂ ಧ್ಯಾನ ಸ್ಥಿತಿಗೆ ಕರೆದೊಯ್ದರು.

ದಾವಣಗೆರೆಯಿಂದ, ಕೂಡ್ಲಿಗಿಯಿಂದ ಹೀಗೆ ಹಲವಾರು ಪ್ರಾಂತ್ಯಗಳಿಂದ ಸುಮಾರು 500 ಜನ ಸೇರಿದ್ದರು.

ಸಂಜೆ 6 ಗಂಟೆಗೆ ಪತ್ರೀಜಿಯವರ ಒಂದು ಧ್ಯಾನ ತರಗತಿ ಪಿರಮಿಡ್ ಬೆಸ್ಮೆಂಟ್‌ನಲ್ಲಿ ಇತ್ತು. ಅನುಭವಗಳನ್ನು ಹೇಳಿಸಿ ನಂತರ, ಮನಸ್ಸು ಮೈಂಡ್ ಬಗ್ಗೆ ವ್ಯವಸ್ಥಿತವಾಗಿ ವಿವರಿಸಿದರು.

★ ನಾನು ಈಗ ಮೈಂಡ್ ಬಗ್ಗೆ ಕುರಿತ ವಿಚಾರವನ್ನು ತಿಳಿಸಲು ಇಚ್ಛಿಸುತ್ತೇನೆ. ಮೈಂಡ್ ಎನ್ನುವುದು ಆಂಗ್ಲ ಶಬ್ದ. ಭಾರತದಲ್ಲಿ ಮೈಂಡ್(ಮನಸ್ಸು)ಅನ್ನು 4 ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ... ಮನೋ, ಬುದ್ಧಿ, ಚಿತ್ತ, ಅಹಂಕಾರ. ಪಾಶ್ಚಾತ್ಯ ದೇಶದವರಿಗೆ ಮೈಂಡ್ ಎಂದರೆ ಏನು ಎಂದು ಸರಿಯಾಗಿ ಗೊತ್ತಿಲ್ಲ, ಅದಕ್ಕೆ ಅವರ ಮೈಂಡ್ ಗಳು ಸರಿಯಿಲ್ಲ. ಪೌರ್ವಾತ್ಯ ದೇಶದವರಿಗೆ ಮೈಂಡ್ ಎಂದರೆ ನಾಲ್ಕು ವಿಭಾಗಗಳಾಗಿ ಗೊತ್ತು.

ಮನೋ: ಎಂದರೆ ನನಗೆ ಇಡ್ಲಿ ಬೇಕು, ನನಗೆ ವಡೆ ಬೇಡ ಏನಾದರೂ ಕೊರತೆ.

ಬುದ್ಧಿ : ಎಂದರೆ... ಈ ಕಟ್ಟಡ ಎಷ್ಟು ಚೆನ್ನಾಗಿದೆ. ಯಾವ ಇಂಜಿನಿಯರ್ ಇದನ್ನು ಕಟ್ಟಿಸಿದ್ದಾರೆ. ಇದು ಕೋರಿಕೆಯಲ್ಲ ಇದು ನನ್ನ ಬುದ್ಧಿಗೆ ಸಂಬಂಧ ಪಟ್ಟಿದ್ದು. ಆ ಇಂಜಿನಿಯರಿಂಗ್‌ನ ಬುದ್ಧಿ. ನಾನು ಬೈಬಲ್ ಓದಬೇಕು, ಇದು ಬಹಳ ಪ್ರಾಮುಖ್ಯತೆ ನನಗೆ, ಅದನ್ನು ಅರ್ಥಮಾಡಿಕೊಳ್ಳುವುದು ಬುದ್ಧಿ. ನೀನು ಯಾವಾಗ





ಕೂಡ್ಲಿಗಿ ಧ್ಯಾನಾರ್ಥಿಗಳು

ಅರ್ಥಮಾಡಿಕೊಳ್ಳುತ್ತೀಯೊ ಆವಾಗ ನೀನು ಬುದ್ಧಿಯನ್ನು ಹೆಚ್ಚಿಸಿಕೊಳ್ಳಬಹುದು. ಅರ್ಥವೇ ಆಗಲಿಲ್ಲವೆಂದರೆ, ಹೇಗೆ ಹೆಚ್ಚಿಸಿಕೊಳ್ಳುತ್ತೀಯ!

**ಚಿತ್ತ:** ನನ್ನ ಮನಸ್ಸು ಗೊಂದಲದಿಂದ ತುಂಬಿದೆ. ನನ್ನ ಮನಸ್ಸು ಎಲ್ಲೆಲ್ಲೋ ಹೋಗುತ್ತದೆ. ಈ ಹೋಗುವುದನ್ನು 'ಚಿತ್ತ' ಎನ್ನುತ್ತೇವೆ. ನೀನು ಶಾಲೆಯಲ್ಲಿ ಇದ್ದರೆ, ಮನೆಗೆ ಮನಸ್ಸು ಹೋಗುತ್ತದೆ. ನಿನಗೆ ಹೋಗಬೇಕೆಂದಿಲ್ಲ ಆದರೂ ಹೋಗುತ್ತದೆ.

**ಅಹಂಕಾರ :** ನಾನು ದೊಡ್ಡ ಸ್ವಾಮೀಜಿ. ಇದು ಅಹಂಕಾರ. 'ನಾನು' ಎನ್ನುವುದು ಅಹಂಕಾರ. ಆದರೆ, ಆಂಗ್ಲ ಭಾಷೆಯಲ್ಲಿ Ego ಎನ್ನುತ್ತೇವೆ. ಆದರೆ, ಇದು ಮನಸ್ಸಿನ ಕಾರ್ಯವೈಖರಿಗಳಿಗೆ ಅಡ್ಡಿಮಾಡುತ್ತದೆ.

ಮನಸ್ಸು, ಬುದ್ಧಿ, ಚಿತ್ತ ಮತ್ತು ಅಹಂಕಾರಗಳಲ್ಲಿ 'ಮನಸ್ಸು', 'ಬುದ್ಧಿ'ಗಳೆರೆಡು ಹೀರೋಗಳು. ಆದರೆ, 'ಚಿತ್ತ' 'ಅಹಂಕಾರ' ಇವುಗಳು ವಿಲನ್‌ಗಳಿದ್ದಂತೆ.

ನಾನು ಜಿಲೇಬಿ ತಿನ್ನಬೇಕು ಇದು ತಪ್ಪೇ? ಇಲ್ಲಾ! ನನಗೆ ಬಿಸಿಬೇಳೆ ಬಾತು ಬೇಕು ಇದು ತಪ್ಪೇ? ಇಲ್ಲಾ! ನಾನು ದುಡ್ಡು ಮಾಡಬೇಕು ಇದು ತಪ್ಪಾ? ಇಲ್ಲಾ! ನಾನು ಕಲೆಕ್ಟರ್ ಆಗಬೇಕು ಇದು ತಪ್ಪಾ? ಇಲ್ಲಾ! ಮನದಿಂದ ಯಾವುದೇ ತಪ್ಪಿಲ್ಲ. ಆದರೆ, ಭಾರತದಲ್ಲಿ ಎಲ್ಲಾ ವೈರಾಗ್ಯ ಎನ್ನುತ್ತಾರೆ. ಮದುವೆ ಆಗಬಾರದು, ಸನ್ಯಾಸತ್ವ ತೆಗೆದುಕೊಳ್ಳಬೇಕು ಎನ್ನುತ್ತಾರೆ. ಇದು ಸರಿಯಲ್ಲ, ಆದರಿಂದಲೇ, ಭಾರತದಲ್ಲಿ ಯಾರಿಗೂ ಜ್ಞಾನೋದಯವಾಗಿಲ್ಲ.

ಆದರೆ, ನಾವು ಈ 'P.S.S.M' ಮೂಮೆಂಟ್‌ನಲ್ಲಿ ವೈರಾಗ್ಯ ಕಲಿಸುತ್ತೇವಾ? ಇಲ್ಲಾ! ಮದುವೆ ಆಗಬೇಡಿ ಅನ್ನುತ್ತೇವಾ? ಇಲ್ಲಾ!

ಕೃಷ್ಣನಿಗೆ 8 ಜನ ಹೆಂಡತಿಯರು ಇದ್ದರು ಆದರೆ ಅವನಿಗೆ ಜ್ಞಾನೋದಯವಾಗಲಿಲ್ಲವೇ? ಮದುವೆ ಮನಸ್ಸಿಗೆ ಸಂಬಂಧ ಪಟ್ಟಿಲ್ಲ, ಇದು ದೇಹಕ್ಕೆ ಸಂಬಂಧಪಟ್ಟದ್ದು.

ಮುಖ್ಯ ಶತ್ರು ಎಂದರೆ ಚಿತ್ತ. ಅಹಂಕಾರ ಚಿತ್ತದ ನೆರಳು. ಎಲ್ಲಾ ತಾಯಂದಿರು ಮೂರ್ಖರು. ಮಕ್ಕಳು ಶಾಲೆಗೆ ಹೋದರೆ ಅವರ ಚಿತ್ತವೆಲ್ಲಾ ಅಲ್ಲಿಯೇ ಇರುತ್ತದೆ.

★ ನನ್ನ ಮನಸ್ಸಿನಲ್ಲಿ 99% ಚಿತ್ತವಿದೆ. 1% ಬುದ್ಧಿಇದೆ.

★ ಬುದ್ಧಿ ಎಂದರೆ ಪ್ರಯೋಜನಕ್ಕೆ ಬರುವ ಆಲೋಚನೆಗಳು, ಚಿತ್ತ ಎಂದರೆ ಪ್ರಯೋಜನಕ್ಕೆ ಬಾರದ ಆಲೋಚನೆಗಳು

★ ಈ ಚಿತ್ತದಿಂದ ನಮಗೆ 99% B.P, ಕ್ಯಾನ್ಸರ್, ಜ್ಞಾಪಕ ಶಕ್ತಿಯ ಕೊರತೆ, ರೋಗಗಳು ಬರುತ್ತವೆ.

★ ಚಿತ್ತದಿಂದ ನಮಗೆ 99% ಎನರ್ಜಿ ವ್ಯರ್ಥವಾಗುತ್ತಿದೆ.

★ ಎಲ್ಲರೂ ಅಹಂಕಾರವನ್ನು ಬಿಡಿ ಎಂದು ಹೇಳುತ್ತಾರೆ ಅದು ಹೇಗೆ ಸಾಧ್ಯ. ಎಲ್ಲಾದರೂ ನಮ್ಮ ನೆರಳನ್ನು ತೆಗೆಯಲು ಸಾಧ್ಯವಾ. ಎಲ್ಲಿಯವರೆಗೆ ಚಿತ್ತ ಇದೆಯೋ ಅಲ್ಲಿಯವರೆಗೆ ಅಹಂಕಾರವಿರುತ್ತದೆ.

★ ಯಾವಾಗ ಚಿತ್ತವನ್ನು ಖಾಲಿ ಮಾಡುತ್ತೀಯೋ (ವಶಮಾಡುಕೊಳ್ಳುತ್ತೀಯೋ) ಆಗ ಅಹಂಕಾರವಿರುವುದಿಲ್ಲ.

★ ಆದರೆ, ಭಾರತದಲ್ಲಿ ಮನಃ ಮತ್ತು ಅಹಂಕಾರವನ್ನು ಬಿಡಬೇಕು ಎನ್ನುತ್ತಾರೆ, ಆದರೆ ಇದು ತಪ್ಪು.

★ ಆದರೆ, ಯಾರೂ ಚಿತ್ತವನ್ನು ಖಾಲಿ ಮಾಡಿ ಎಂದು ಹೇಳುವುದಿಲ್ಲ.

★ ಧ್ಯಾನದಲ್ಲಿ ಚಿತ್ತ ಖಾಲಿಯಾಗುತ್ತದೆ. ಆಗ 99% ಎನರ್ಜಿ ಉಳಿತಾಯವಾಗುತ್ತದೆ. ಇಲ್ಲಿ ಉಳಿತಾಯವಾದ ಎನರ್ಜಿ ಬುದ್ಧಿಗೆ ಹೋಗುತ್ತದೆ ಮತ್ತು ನಮ್ಮ ಆಸೆಗಳನ್ನು ತೀರಿಸುತ್ತದೆ.

★ ಒಂದು ಎಕರೆ ಬತ್ತದ ಗದ್ದೆಯಲ್ಲಿ ಎಷ್ಟು ಬತ್ತದ ಸಸಿಗಳು ಇರಬೇಕು? 1 ಲಕ್ಷ ಇರಬೇಕು. ಅದು ಬಿಟ್ಟು 1 ಬತ್ತದ ಸಸಿ ಇದೆ. ಉಳಿದಿದ್ದೆಲ್ಲಾ ಕಳೆಯಿಂದ ತುಂಬಿದೆ. ಇಲ್ಲಿ ಏನಾಗುತ್ತದೆ, ಎಲ್ಲ ಎನರ್ಜಿಯನ್ನು ಕಳೆತೆಗೆದು ಕೊಳ್ಳುತ್ತಿದೆ. ಅದೇ ರೀತಿ ನಮ್ಮ ಚಿತ್ತದಲ್ಲಿ 0.1% ಒಳ್ಳೆಯ ಕೆಲಸಕ್ಕೆ ಬರುವ ಆಲೋಚನೆಗಳು ಇದ್ದರೆ, 99% ಕೆಲಸಕ್ಕೆ ಬಾರದ ಆಲೋಚನೆಗಳು ಇರುತ್ತವೆ. ಇವು ಎನರ್ಜಿಯನ್ನು ಹೀರಿಕೊಳ್ಳುತ್ತವೆ. ಆದ್ದರಿಂದ, ದೇಹದಲ್ಲಿ ಯಾವ ಎನರ್ಜಿ ಇರದೆ, ಎಲ್ಲಾ ಕೆಲಸಕ್ಕೆ ಬಾರದ ಆಲೋಚನೆಗಳಿಗೆ ಹಂಚಿ ಹೋಗಿದೆ. ಆದಕ್ಕಾಗಿಯೇ ಚಿತ್ತವನ್ನು ನಮ್ಮ



ಹೊಸಕೋಟೆ ಧ್ಯಾನಾರ್ಥಿಗಳು



ವಶಮಾಡಿಕೊಳ್ಳಬೇಕು.

★ ಧ್ಯಾನದಿಂದ ಬರಬಾರದ ಆಲೋಚನೆಗಳು ಹೋಗಿ ಕೆಲಸಕ್ಕೆ ಬರುವ ಆಲೋಚನೆಗಳು ಬರುತ್ತವೆ. ಆಗ ನಿಮ್ಮ ಮನದ ಆಸೆಗಳು ತೀರುತ್ತವೆ.

★ ನನಗೆ ಒಂದು ದೊಡ್ಡ ಪಿರಮಿಡ್ ಬೇಕು ಆದರೆ, ನನ್ನ ಹತ್ತಿರ ದುಡ್ಡಿಲ್ಲ, ಆದರೆ, ನಾನು ಧ್ಯಾನಿ. ಎನರ್ಜಿಯೆಲ್ಲಾ ನನ್ನ ಮನದಲ್ಲಿ ಇದೆ. ಆದರಿಂದ, ಇಲ್ಲಿ ಒಂದು ಪಿರಮಿಡ್ ಬಂತು. ಇದೆಲ್ಲಾ ಹೇಗೆ ಸಾಧ್ಯ? ನನ್ನ ಚಿತ್ತ ವ್ಯರ್ಥ ಆಲೋಚನೆಗಳಿಂದ ತುಂಬಿಲ್ಲ. ಅದು ಖಾಲಿ ಇದೆ.

★ ಎಲ್ಲಿಯವರೆಗೆ ನಿಮ್ಮ ದೇಹವಿರುತ್ತದೆಯೋ, ನೀವು ನಿಮ್ಮ ನೆರಳನ್ನು ಅಲ್ಲಿಯವರೆಗೆ ತೆಗೆಯಲು ಸಾಧ್ಯವಿಲ್ಲ.ಅದೇ ರೀತಿ ನಿಮ್ಮ ನೆರಳನ್ನು (ಅಹಂಕಾರವನ್ನು) ತೆಗೆಯಲು ಸಾಧ್ಯವಿಲ್ಲ, ನಿಮ್ಮ ಚಿತ್ತವನ್ನು ತೆಗೆದುಹಾಕಬೇಕು.

★ ಆದ್ದರಿಂದ, ಅಹಂಕಾರದ ಬಗ್ಗೆ ನೋವು ಪಡಬೇಡಿ. ಚಿತ್ತದ ಬಗ್ಗೆ ಆಲೋಚಿಸಿ. ಧ್ಯಾನದಿಂದ ಚಿತ್ತವನ್ನು ತೆಗೆದುಹಾಕಬಹುದು.

★ ಧ್ಯಾನ ಮಾಡಿ, ನೀವು ಭಗವದ್ಗೀತೆಯನ್ನು ಓದಿ. ನಿಮಗೆ ಎಲ್ಲಾ ಅರ್ಥವಾಗುತ್ತದೆ, ಹಾಗಾದರೇನೇ, ನಿಮ್ಮ ಬುದ್ಧಿ ಬೆಳೆಯುತ್ತದೆ.

★ ನಾನು ಚಿತ್ತ ಇಲ್ಲದೆ ಇರುವುದರಿಂದ, ನನಗೆ ಕರ್ನೂಲಿನಲ್ಲಿ ಪಿರಮಿಡ್ ಬೇಕೆಂದರೆ, ಅಲ್ಲಿ ಬಿ.ವಿ ರೆಡ್ಡಿ ಕಟ್ಟಿಸಿಕೊಟ್ಟರು. ಬೆಂಗಳೂರಿನಲ್ಲಿ ಬೇಕೆಂದುಕೊಂಡೆ, ಇಲ್ಲಿ ಈಗ ಪಿರಮಿಡ್ ಬಂದಿದೆ. ನನಗೆ ಈಗ ಪ್ರಪಂಚದಾದ್ಯಂತ ಪಿರಮಿಡ್‌ಗಳು ಬೇಕು. ಆಗ ಎಲ್ಲರೂ ಬರುತ್ತಾರೆ. ಪಾಂಡಿಚೇರಿಯಲ್ಲಿ ಒಬ್ಬ ಅರವಿಂಧ್ ಎನ್ನುವವರು, ಈಗ 5 ಪಿರಮಿಡ್‌ಗಳು 20X20 ಮತ್ತು ಆರು 30X30 ಹಾಗೂ 200X200 ಕಟ್ಟಿಸುತ್ತಿದ್ದಾರೆ.

★ ಆದ್ದರಿಂದ, ಮೈಡಿಯರ್ ಫ್ರೆಂಡ್ಸ್ ನೀವು ಧ್ಯಾನ ಮಾಡುತ್ತಾ ಹೋಗಿ ನಿಮ್ಮ ಎಲ್ಲ ಆಸೆಗಳು ತೀರುತ್ತವೆ. ನಿಮಗೆ ಎಲ್ಲಾ ಜ್ಞಾನ ಬರುತ್ತಾ ಹೋಗುತ್ತದೆ.

★ ನಾನು ಎಂದಾದರೂ ನಿಮ್ಮ ಆಸೆಗಳನ್ನು ಬಿಟ್ಟುಬಿಡಿ, ಸಿನಿಮಾಗಳನ್ನು ನೋಡಬೇಡಿ, ಹೆಂಡತಿ ಹತ್ತಿರ ಮಾತನಾಡಬೇಡಿ ಎಂದು ಹೇಳಿದ್ದೀನಾ? ಹೇಳಿಲ್ಲಾ!

★ ಸಮಯವನ್ನು ವ್ಯರ್ಥ ಮಾಡಬೇಡಿ, ಅನವಶ್ಯಕ ಮಾತುಗಳನ್ನು ಆಡಬೇಡಿ.

★ ನಂತರ, 40 ನಿಮಿಷಗಳ ಕಾಲ ಧ್ಯಾನ.

★ ಧ್ಯಾನವೆಂದರೆ, ಮನೋನಾಶವಲ್ಲ

ಧ್ಯಾನವೆಂದರೆ, ಬುದ್ಧಿನಾಶವಲ್ಲ

ಧ್ಯಾನವೆಂದರೆ, ಚಿತ್ತವಿನಾಶ

★ ನಿಮಗೆ ಏನು ಬೇಕೋ ಅದನ್ನು ಮಾಡಿದರೆ ನಿಮಗೆ ಎನರ್ಜಿ ಬರುತ್ತದೆ. ನಿಮಗೆ ಏನು ಬೇಡವೋ ಅದನ್ನು ಒತ್ತಾಯಕ್ಕೆ ಮಾಡಿದರೆ ನಿಮ್ಮ ಎನರ್ಜಿ ವ್ಯರ್ಥವಾಗುತ್ತದೆ. ನಾನು ಇದಕ್ಕೆ ಒಂದು ಉದಾಹರಣೆ ಕೊಡುತ್ತೇನೆ. ಅದು ಏನೆಂದರೆ, ನನಗೆ ನಾಳೆ ಬೆಳಗ್ಗೆ ಇಡ್ಲಿ ತಿನ್ನಬೇಕು ಎನ್ನಿಸುತ್ತದೆ, ಅಂದರೆ, ಇಡ್ಲಿ ಮಾತ್ರ ಬೇಕು. ನಾನು ಹತ್ತಿರವಿರುವ ಹೋಟೆಲ್‌ಗೆ ಹೋಗುತ್ತೇನೆ, ಆದರೆ, ಅಲ್ಲಿ ಇಡ್ಲಿ ಇರುವುದಿಲ್ಲ, ವಡೆ, ಪೂರಿ ಇದೆ. 2 ಕಿಮೀ ಮುಂದಕ್ಕೆ ಇಡ್ಲಿ ಸಿಗುತ್ತದೆ. ಆದರೆ, ನನಗೆ ವಡೆ ಮತ್ತು ಪೂರಿ ಇಷ್ಟ ಇಲ್ಲಾ, ಆದರೂ, 2 ಕೀಮಿ ದೂರ ಹೋಗಬೇಕು ಎಂದು ಇಲ್ಲೇ ವಡೆ,ಪೂರಿ ತಿನ್ನುತ್ತೇನೆ ಎಂದರೆ, ಆಗ ನನಗೆ 10 ಎನರ್ಜಿ ಪಾಯಿಂಟ್‌ಗಳ ಬದಲು, ಕೇವಲ 5 ಎನರ್ಜಿ ಪಾಯಿಂಟ್‌ಗಳು ಬರುತ್ತವೆ. ಅದೇ 2 ಕಿಮೀ ದೂರ ಹೋಗಿ, ನನಗೆ ಬೇಕಾದ ಇಡ್ಲಿಯನ್ನೇ ತಿನ್ನುತ್ತಿದ್ದೇನೆ. ಆಗ ನನಗೆ 5 ಎನರ್ಜಿ ಪಾಯಿಂಟ್‌ಗಳು ನನ್ನ ನಡಿಗೆಗೆ ಹೋದರೂ, ನನ್ನಲ್ಲಿ 20 ಪಾಯಿಂಟ್ಸ್‌ನಷ್ಟು ಎನರ್ಜಿ ಶೇಖರಣೆಯಾಗುತ್ತದೆ.

★ Always Do, what do you want to do!

★ ನಿಮಗೆ ನಿಮ್ಮ ಮನಸ್ಸು ಏನನ್ನು ಹೇಳುತ್ತದೆಯೋ ಅದನ್ನೇ ಮಾಡಿ.

★ ನಾನು ಒಂದು ವರ್ಷ ಮೌನದಲ್ಲಿ ಇದ್ದೆ, ಒಂದು ವರ್ಷ ಕೇವಲ ಟೊಮ್ಯಾಟೋ ಸೂಪ್ ಕುಡಿದು ಇದ್ದೆ, ಆದರೆ, ನನಗೆ ಎಲ್ಲಿಂದ ಎನರ್ಜಿ ಬಂತು. ಟೊಮ್ಯಾಟೋ ಸೂಪ್‌ನಿಂದ ಅಲ್ಲ, ನನಗೆ ಏನು ಬೇಕೊ ಅದನ್ನು ಮಾಡಿದೆ, ಆದ್ದರಿಂದ, ಎನರ್ಜಿ ಬಂತು.

★ ನಿನಗೆ ಏನು ಬೇಡವೋ ಅದನ್ನು ಮಾಡಬೇಡ. ನಿನಗೆ ಏನು ಬೇಕೋ ಅದನ್ನು ಮಾಡು. ಇದೇ ಎನರ್ಜಿಯ ಒಂದು ಗುಟ್ಟು. ಮನಕ್ಕೆ 3 ಜಿಲೇಬಿಗಳು ಬೇಕು. ಆದರೆ, ದೇಹಕ್ಕೆ 2 ಮಾತ್ರ



ಹಿಡಿಸುತ್ತದ್ದೆ. ಆಡಿ, ಎರಡನ್ನು ಮಾತ್ರ ನೀಡಿ ಬಹಳ ಕೊಡಬೇಡಿ. ಎಂದು ಚೆನ್ನಾಗಿ ಎನರ್ಜಿಯ ಬಗ್ಗೆ ತಿಳಿಸಿದರು.

2ನೇ ತಾರೀಖು ಎಂದರೆ, ಭಾನುವಾರ ಬೆಳಗ್ಗೆ 6.00 ರಿಂದ 7.30ರವರೆಗೆ "ಏಟತಧ್ಯಾನ"ವನ್ನು ಪಿರಮಿಡ್‌ನಲ್ಲಿ ಮಾಡಿಸಿದರು. ಪತ್ರೀಜಿಸರ್‌ರವರು ಕೊಳಲು ನಾದದಿಂದ ಮತ್ತು ಭಗವದ್ಗೀತೆಯ ಶ್ಲೋಕಗಳಿಂದ ಎಲ್ಲರನ್ನು ಧ್ಯಾನ ಮಗ್ನರನ್ನಾಗಿ ಮಾಡಿದರು. ನಂತರ, ಕೂಡ್ಲಿಗಿಯಿಂದ ಒಂದು ಬಸ್ ಜನ ಬಂದಿದ್ದರು. ಅವರಲ್ಲಿ ಕೆಲವರ ಅನುಭವಗಳನ್ನು ಹೇಳಿಸಿದರು. ನಂತರ ಆಧ್ಯಾತ್ಮಿಕದ ಆರು ಸಿದ್ಧಾಂತಗಳನ್ನು ತಿಳಿಸಿಕೊಟ್ಟರು.

**1. ಆತ್ಮ ಸಿದ್ಧಾಂತ**
**2. ಕರ್ಮ ಸಿದ್ಧಾಂತ**
**3. ಪುನರ್ಜನ್ಮ ಸಿದ್ಧಾಂತ**
**4. ಪುರೋಗಮನ ಸಿದ್ಧಾಂತ**
**5. ಯೋಗ ಸಿದ್ಧಾಂತ**
**6. ಅನೇಕಾನೇಕ ಸಿದ್ಧಾಂತ**

**1. ಆತ್ಮ ಸಿದ್ಧಾಂತ :-** ನಾವು ದೇಹವಲ್ಲ ಆತ್ಮ ಎಂದು ತಿಳಿಯುವುದು. ನಾವು ಈ ಭೂಮಿಗೆ ದೇಹದಿಂದ ಬಂದಿಲ್ಲ ಆತ್ಮದಿಂದ ಬಂದಿದ್ದೇವೆ. ಅರ್ಜುನ ಕೃಷ್ಣನಿಗೆ ನೀನು ಯಾರು ಎಂದು ಕೇಳಿದಾಗ ನಾನು ಶರೀರ, ನಾನು ರಾಜ, ಎಂದು ಹೇಳಲಿಲ್ಲ '' ಮಮಾತ್ಮ '' ನಾನು ಆತ್ಮ ಎಂದು ಹೇಳುತ್ತಾನೆ.

**2. ಕರ್ಮ ಸಿದ್ಧಾಂತ :-**ಒಂದೊಂದು ಜನ್ಮ ಒಂದೊಂದು ಕರ್ಮ ಮಾಡಲು ಬರುತ್ತೇವೆ. ಒಳ್ಳೆ ಕರ್ಮಗಳನ್ನು ಮಾಡಿದರೆ ಒಳ್ಳೆಯ ಜನ್ಮ.

**3. ಪುನರ್ಜನ್ಮ ಸಿದ್ಧಾಂತ :-**ಮತ್ತೆ ಮತ್ತೆ ಜನಿಸುವುದನ್ನು ಪುನರ್ಜನ್ಮ ಸಿದ್ಧಾಂತ ಎನ್ನುತ್ತೇವೆ.

ಕೃಷ್ಣ ಅರ್ಜುನನಿಗೆ ಹೇಳುತ್ತಾನೆ ನನಗೆ ನನ್ನ ಜನ್ಮಗಳು ನಿನ್ನ ಜನ್ಮಗಳು ಗೊತ್ತು ಎಂದು.

ಎನ್.ಟಿ.ಆರ್. ಹೇಗೆ ಅನೇಕ ಚಿತ್ರಗಳಲ್ಲಿ ಹಲವಾರು ಪಾತ್ರಗಳನ್ನು ಹಾಕಿ ಅದರ ಅನುಭವಗಳನ್ನು ಪಡೆದನೊ, ಅದೇ ರೀತಿ ನಾವು ಈ ಭೂಮಿ ಮೇಲೆ ಎಲ್ಲಾ ಪಾತ್ರಗಳ ಅನುಭವಗಳನ್ನು ಪಡೆಯಲು ಬರುತ್ತೇವೆ.

ಒಂದೊಂದು ಜನ್ಮ ಒಂದೊಂದು ಆಟ, ಒಂದೊಂದು ಅದ್ಭುತ. ನಾವೆಲ್ಲ ನಾಟಕದ ಪಾತ್ರಧಾರಿಗಳು.

ಮಾಂಸಾಹಾರಿಗಳು 4000 ಜನ್ಮಗಳನ್ನು ಪಡೆಯುತ್ತಾರೆ ಬೇರೆಯವರು 400 ಜನ್ಮಗಳನ್ನು ಪಡೆಯುತ್ತಾರೆ.



**4. ಪುರೋಗಮನ ಸಿದ್ಧಾಂತ :-** ಈಗ ನಾವು 1ನೇ ತರಗತಿಯಿಂದ ಎರಡಕ್ಕೆ, ಎರಡರಿಂದ ಮೂರಕ್ಕೆ ಹೋಗುತ್ತೇವೆ. ಇದೇ ಪುರೋಗಮನ.

ಒಬ್ಬ ವಿದ್ಯಾರ್ಥಿ, 25 ಅಂಕಗಳನ್ನು ಪಡೆದು ಫೇಲ್ ಆಗಿರುತ್ತಾನೆ. ಮುಂದಿನ ಬಾರಿ 30 ಅಂಕಗಳನ್ನು ಪಡೆಯುತ್ತಾನೆ. ಆದರೂ, ಆತ 'ಫೇಲ್' ಎಂದು ಹೇಳುತ್ತಾರೆ. ಅದು ಹೇಗೆ ಅವನಲ್ಲಿ ಪುರೋಗಮನ ಆಗಿದೆ. ಆತ ಹೀಗೆ ಫೇಲ್ ಆತನಲ್ಲಿ ಪುರೋಗಮನ ಇದೆ. ನೀನು ಮಾಡುವ ಪ್ರತಿಕರ್ಮ ನಿನಗೆ ಒಂದು ಹೊಸ ಅನುಭವವನ್ನು ನೀಡುತ್ತದೆ, ಸೃಷ್ಟಿಯಲ್ಲಿ ಪ್ರತಿಯೊಂದು ಅನುಭವವೇ.

ಸೃಷ್ಟಿಯಲ್ಲಿ ಯಾವುದು Failure ಇಲ್ಲ.

**5. ಯೋಗ ಸಿದ್ಧಾಂತ :-** ನೀನು ಧ್ಯಾನ ಮಾಡಲಿ ಮಾಡದೆ ಇರಲಿ, ನೀನು ಚೆನ್ನಾಗಿದಿಯಲ್ಲ, ಆದರೆ, ಧ್ಯಾನ ಮಾಡಿದರೆ, ಇನ್ನೂ ಚೆನ್ನಾಗಿರುತ್ತೀಯ. ಧ್ಯಾನ ಮಾಡದೆಯಿದ್ದರೆ 2 ಕಿ.ಮೀ. ವೇಗದಲ್ಲಿ ಹೋಗುತ್ತೀಯ.

ಆದ್ದರಿಂದ', ಕೃಷ್ಣ ಭಗವದ್ಗೀತೆಯಲ್ಲಿ 'ತಸ್ಮಾತ್ ಯೋಗಿಭವಾರ್ಜುನ' ಎಂದು ಹೇಳಿದ್ದು.

ಎಲ್ಲರೂ ಪ್ರತಿ ದಿನ ಯೋಗ ಸಿದ್ಧಾಂತ ಮಾಡಬೇಕು.

ನೀನು ಭಗವದ್ಗೀತೆಯನ್ನು ಓದದೆಯಿದ್ದರೂ ಚೆನ್ನಾಗಿರುತ್ತೀಯ. ಆದರೆ, ಓದಿದಾಗ ಇನ್ನೂ ಚೆನ್ನಾಗಿರುತ್ತಿಯ.

**6.ಅನೇಕಾನೇಕ ಸಿದ್ಧಾಂತ :-** ನಕ್ಷತ್ರಗಳು ಎಷ್ಟು ಇವೆ? ಅನೇಕ ಅನೇಕ...

ಲೋಕಗಳು ಎಷ್ಟು ಇವೆ? ಅನೇಕ ಅನೇಕ.......

ನೀನು ಧ್ಯಾನ ಎಷ್ಟು ಮಾಡಬಹುದು? ಅನೇಕ ಅನೇಕ......

ಎಷ್ಟು ಜನ್ಮಗಳಿವೆ ? ಅನೇಕ ಅನೇಕ......

ಯಾವಾಗ ನೀನು ಯೋಗಿ ಆಗುತ್ತೀಯ, ಆಗ ನೀನು ಎಲ್ಲ ಹತ್ತಿರ

ಅನೇಕ ಅನೇಕ ಎಂದು ತಿಳಿಯುತ್ತೀಯಾ.

ಯಾವಾಗ ನೀನು ಯೋಗಿ ಆಗುತ್ತೀಯೋ ಆಗ ಎಲ್ಲರಲ್ಲಿಯೂ ನೀನೇ ಇರುವೆನೆಂದು ತಿಳಿಯುತ್ತೀಯಾ.

ಬ್ರಹ್ಮ ಜ್ಞಾನದಲ್ಲಿ ಇರುವವನು ಸಹ ಬ್ರಹ್ಮನೇ.

ದಕ್ಷಿಣ ಕೋರಿಯಯಿಂದ 20 ವಿಧ್ಯಾರ್ಥಿಗಳು ಧ್ಯಾನ ಕಲಿಯಲು ಬಂದಿದ್ದರು. ಅವರು ವ್ಯಾಲಿಯ ಅದ್ಭುತ ಪರಿಸರ ಮತ್ತು ಪಿರಮಿಡ್ಡನ್ನು ನೋಡಿ ಬಹಳ ಸಂತೋಷ ಪಟ್ಟರು.

ನಂತರ ಸಂಜೆ 6.30ಕ್ಕೆ ಇನ್ನೊಂದು ಧ್ಯಾನ ತರಗತಿಯನ್ನು ತೆಗೆದುಕೊಂಡರು. ಆಗ **ತುಮಕೂರಿನ ಕಾಮತ್ ಗ್ರೂಪ್ ಆಫ್ ಹೋಟೆಲ್** ನ ಮಾಲಿಕರು ಬಂದಿದ್ದರು.

★ ಧ್ಯಾನವೆಂದರೆ, ಕೆಲಸಕ್ಕೆ ಬಾರದ ಆಲೋಚನೆಗಳನ್ನು ತೆಗೆದುಹಾಕುವುದು.

★ ನಮ್ಮ ಚಿತ್ತದಲ್ಲಿ 1-10 ಕೆಲಸಕ್ಕೆ ಬರುವ ಆಲೋಚನೆಗಳು ಇದ್ದರೆ 99 ಕೆಲಸಕ್ಕೆ ಬಾರದ ಆಲೋಚನೆಗಳು ಬೇರೆಯವರ ಮೇಲೆ.

★ ಧ್ಯಾನವೆಂದರೆ ಮನಸ್ಸಿಗೆ (ಚಿತ್ತ)ಕ್ಕೆ ರಜೆ ಘೋಷಣೆ ಮಾಡುವುದು.

★ ನೀವು ಧ್ಯಾನ ಮಾಡದೆ ಇದ್ದರೆ, ನಿಮ್ಮ ಚಿತ್ತ ಪೂರ್ತಿ ಕೆಲಸಕ್ಕೆ ಬಾರದ ಆಲೋಚನೆಗಳಿಂದ ತುಂಬುತ್ತದೆ.

**'ಯೋಗಃ ಕರ್ಮಸು ಕೌಶಲಂ'**

ಧ್ಯಾನಕ್ಕೆ ಮುಂಚೆ 1% ಬುದ್ಧಿ, 99% ಚಿತ್ತವಿರುತ್ತದೆ.

ಧ್ಯಾನಕ್ಕೆ ಬಂದ ಮೇಲೆ 100% ಬುದ್ಧಿ, 0% ಚಿತ್ತವಾಗುತ್ತದೆ.


ಕೊರಿಯನ್ ಪ್ರವಾಸಿಗರು

ಬುದ್ಧನಿಗೆ ಚಿತ್ತ ಇರಲಿಲ್ಲ ಬರೀ ಬುದ್ಧಿ ಇತ್ತು.

ಬುದ್ಧಿ ಇರುವವನೇ ಬುದ್ಧ

ಎಲ್ಲಾ ಕೆಲಸಗಳು, ಆಲೋಚನೆಗಳು, ಬುದ್ಧಿಯಿಂದ ಮಾಡುವರೋ ಅವನೇ ಬುದ್ಧ, ಎಲ್ಲರು ಬುದ್ಧರಾಗಬೇಕು.

ಬುದ್ಧಿ ವಿಕಾಸ ಮತ್ತು ಬುದ್ಧಿ ಪ್ರಕಾಶ ಇದು ಧ್ಯಾನದಿಂದ ಮಾತ್ರ ಸಾಧ್ಯ.

ಬುದ್ಧಿ ಎಂದರೆ 'ಹಿರೋ' : ಚಿತ್ತ ಎಂದರೆ 'ವಿಲನ್' ಧ್ಯಾನ ಮಾಡದೆ ಇರುವವನಿಗೆ 'ಚಿತ್ತ' ಶಕ್ತಿಶಾಲಿ ಧ್ಯಾನ ಮಾಡುವವನಿಗೆ ಬುದ್ಧಿ ಶಕ್ತಿಶಾಲಿ.

ಇಲ್ಲಿಗೆ ಪತ್ರೀಜಿ ಅವರ ಎರಡು ದಿನಗಳ ವ್ಯಾಲಿಯ ಪ್ರವಾಸ ಮುಕ್ತಾಯವಾಯಿತು.

– ಸಚಿನ್, ಬೆಂಗಳೂರು.

**''ಸೇತ್ ವಿಜ್ಞಾನ ಶಿಬಿರ''**

**ಹಿರಿಯ ಪಿರಮಿಡ್ ಮಾಸ್ಟರ್‌ಗಳಾದ 'ಶ್ರೀ ಪ್ರೇಮ್‌ನಾಥ್ ಗುಪ್ತ' ಮತ್ತು 'ಶ್ರೀ ಬಾಲ ಕೃಷ್ಣ' ರವರಿಂದ, ಸೆಪ್ಟಂಬರ್ 9, 10 ಮತ್ತು 11 ದಿನಾಂಕಗಳಂದು ಸೇತ್ ಶಿಬಿರ ಪಿರಮಿಡ್ ವ್ಯಾಲಿಯಲ್ಲಿ ನಡೆಯಲಿದೆ.**

**ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಬೇಕಾದ ದೂರವಾಣಿ ಸಂಖ್ಯೆ :**

**ಸೂರ್ಯ ಕಿರಣ್ : 09866787644, ಬಾಲ ಕೃಷ್ಣ : 0944032771**



**''ಧ್ಯಾನ ಆತ್ಮಜ್ಞಾನ ಶಿಕ್ಷಣ ಶಿಬಿರ''**



**ಹಿರಿಯ ಪಿರಮಿಡ್ ಮಾಸ್ಟರ್ ಶ್ರೀ ತಟವರ್ತಿ ವೀರ ರಾಘವ ರಾವ್‌ರವರಿಂದ, ಸೆಪ್ಟೆಂಬರ್ 14, 15 ಮತ್ತು 16 ದಿನಾಂಕಗಳಂದು ಧ್ಯಾನ, ಆತ್ಮ-ಜ್ಞಾನ ಶಿಕ್ಷಣ ಶಿಬಿರ ಪಿರಮಿಡ್ ವ್ಯಾಲಿಯಲ್ಲಿ ನಡೆಯಲಿದೆ.**

**ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಬೇಕಾದ ದೂರವಾಣಿ ಸಂಖ್ಯೆ : 080 43432525, 09448177563**

ಭೀಮೇಶ್ ಕಲಂ ಟು ಕಾಲಂ

# ಜೀವನ – ಜೀವಿಸುವುದು ಮತ್ತು ಇದರ ಉದ್ದೇಶವೇನು!

ಹಿಂದಿನ ಸಂಚಿಕೆಯಿಂದ......



ನಮಗೆ ಯಾವಾಗಲೂ ಸಂತೋಷವೇ ಬೇಕಾ...? ಅಥವಾ ಆನಂದವೇ ಬೇಕಾ...? ಸಂತೋಷವೇ ಬೇಕಾದರೆ, ಆನಂದದ ಕುರಿತು ಚಿಂತಿಸಬೇಡಿರಿ. ಯಾಕೆಂದರೆ ಸಂತೋಷ ದಕ್ಷಿಣ ವವಾದರೆ, ಆನಂದ ಉತ್ತರಧೃವ. ನಿಮ್ಮದು ದಕ್ಷಿಣದ ಕಡೆಗಿನ ಪ್ರಯಾಣವಾದರೆ ನಿಮಗೆ ಉತ್ತರದ ಕಡೆಗಿನ ಚಿಂತೆ ಯಾಕೆ?

ಪ್ರಯಾಣ ಯಾವ ಕಡೆಗೋ ಅದರ ಕುರಿತು ಆಲೋಚಿಸಬೇಕು. ಹಿಂದಿನ ಸಂಚಿಕೆಯಲ್ಲಿ ತಿಳಿಸಿದಂತೆ ಸಂತೋಷ ಮತ್ತು ಆನಂದ ಎರಡೂ ಒಂದೇ ಅಲ್ಲ, ಸಂತೋಷ ಸಿಗುವುದು ವಸ್ತು ಸ್ಥಿತಿಯಲ್ಲಿ ಆನಂದ ಸಿಗುವುದು ಅನ್ವೇಷಣೆಯಲ್ಲಿ,

ಆನಂದ ಸಿಗುವುದು ಪರಮಾನಂದ ಭರಿತನಾದ ಪರಮಾತ್ಮನಲ್ಲಿಯೇ ಎಂಬುದನ್ನು ಓದಿಕೊಂಡಿದ್ದೆವು. ಈಗ ಪ್ರಶ್ನೆಯೇನೆಂದರೆ, ಆನಮದ ಬೇಕಾದರೆ ಪರಮಾತ್ಮನು ಸಿಗಬೇಕು ಹಾಗಾದರೆ ಪರಮಾತ್ಮನು ಸಿಗುವುದು ನಿಜವೇ? ಹಾಗಾಗಿದ್ದರೆ, ಈ ಪ್ರಪಂಚ ಈ ರೀತಿ ಯಾಕಿದೆ ? ಪ್ರತಿ ಮನುಷ್ಯನ ಶರೀರ ರಚನೆ ಒಂದೇ ರೀತಿಯಲ್ಲಿದ್ದರೂ, ಒಬ್ಬರು ಶ್ರೀಮಂತರು ಮತ್ತೊಬ್ಬರು ಊಟಕ್ಕಿಲ್ಲದ ಕಡುಬಡವರು, ಒಬ್ಬರು ಆರೋಗ್ಯವಂತರು ಮತ್ತೊಬ್ಬರು ಅನಾರೋಗ್ಯವಂತರು. ಹೀಗೆ ಹೇಳುತ್ತಾ ಹೋದರೆ, ಪರಮಾತ್ಮನಿರುವುದು ನಿಜವಾದರೆ, ಈ ತಾರತಮ್ಯ ವ್ಯತ್ಯಾಸಗಳು ಯಾತಕ್ಕೆ ಎಂಬ ಪ್ರಶ್ನೆ ಬರುತ್ತದೆ. ಅದು ಬೇಡ. ಇದು ಪರಮಾತ್ಮನಿರುವುದನ್ನು ಒಪ್ಪಿಕೊಳ್ಳುವವರಿಗೆ ಮಾತ್ರವೇ ಈ ವಿಷಯ ಅರ್ಥವಾಗುತ್ತದೆ. ಆತನಿಲ್ಲವೆಂದು ತಿಳಿದುಕೊಳ್ಳುವವರು ಏನನ್ನೂ ಒಪ್ಪುವುದಿಲ್ಲ. ನಿಜವಾಗಲೂ, ಒಪ್ಪುವುದೂ ಹಾಗೂ ಒಪ್ಪದೇ ಇರುವುದು ಎರಡೂ ನಂಬಿಕೆಗಳೇ ಹೊರತು ಬೇರೇನೂ ಅಲ್ಲ. ನಾನು ಪರಮಾತ್ಮನಿರುವನೆಂದು ಬರೆದರೆ, ನಾನೇನು ಪರಮಾತ್ಮ ನನ್ನ ನೋಡಿರುವೆನೇ ಅಥವಾ ನೀವು ಇಲ್ಲವೆಂದು ವಾದಿಸಿದರೆ, ತೋರಿಸಲು ನನ್ನಲ್ಲೇನಾದರೂ ಆಧಾರಗಳಿವೆಯೇ. ಒಂದು ರೀತಿಯಲ್ಲಿ ಎರಡೂ ಒಂದೇ. ಇದ್ದಾನೆನ್ನುವುದು ಮತ್ತು ಇಲ್ಲವೆನ್ನುವುದು ಅವರವರ ಮನಸ್ಥಿತಿಯೇ ಹೊರತು ಸತ್ಯವೇನಲ್ಲ. ಸತ್ಯವೇ ಬೇರೆ, ಮನಸ್ಥಿತಿಯೇ ಬೇರೆ. ಇದನ್ನು ಕುರಿತು ಚೆನ್ನಾಗಿ ಆಲೋಚಿಸಿ ನಿಮಗೇ ತಿಳಿಯುತ್ತದೆ.

ಈ ಎರಡು ಮನಸ್ಥಿತಿಯಲ್ಲಿ ಇದ್ದಾನೆಂಬ ಮನಸ್ಥಿತಿ ನನ್ನದು. ಆದ್ದರಿಂದ, ಅದನ್ನೇ ತೆಗೆದುಕೊಳ್ಳುತ್ತೇನೆ. ಇಲ್ಲವೆನ್ನುವ ಮನಸ್ಥಿತಿಯ ಕುರಿತು ತದನಂತರ ಚರ್ಚಿಸೋಣ ಆಗ ನಿಮಗೆ ತಿಳಿಯುತ್ತದೆ. ಇದ್ದಾನೆಂದು ಒಪ್ಪಿಕೊಂಡು ಜೀವನ ನಡೆಸುವುದು ಉತ್ತಮವೋ ಅಥವಾ ಇಲ್ಲವೆಂದು ತಿಳಿದುಕೊಂಡು ಜೀವಿಸುವುದು ಉತ್ತಮವೋ? ಎಂದು. ನೀವು ಇಲ್ಲವೆಂದು ತಿಳಿದುಕೊಂಡರೆ, ಪ್ರತಿಯೊಂದು ಕೋನದಿಂದಲೂ ಪ್ರಶ್ನೆಗಳೇ ಉದ್ಭವವಾಗುತ್ತದೆ. ಇದ್ದಾನೆಂದು ತಿಳಿದುಕೊಂಡರೆ, ಸಮಾಧಾನಕರ ಜೀವನ ನಡೆಸಬಲ್ಲಿರಿ.

ಓಶೋ ಹೇಳ್ತಾರೆ '' ಇದ್ದಾನೆಂದು ತಿಳಿದುಕೊಂಡು ಜೀವನ ನಡೆಸುವವರೆಲ್ಲರೂ ಪರಮ ಸೋಮಾರಿಗಳು, ಇದ್ದಾನೆಂದು ತಲೆಯಾಡಿಸಿದರೆ ಸಾಕಲ್ಲವೇ? ಅದರ ಕುರಿತು ಚಿಂತೆ ಯಾಕೆ? ಚಿಂತಿಸಲು ನಮಗೇನು ಕೆಲಸವಿಲ್ಲವೇ ಕೆಲಸವಿಲ್ಲದವರು ಖಾಲೀ ಇರುವವರು ಮಾತ್ರ ಪರಮಾತ್ಮನ ಕುರಿತು ಚಿಂತಿಸಬೇಕು, ಒಂದು ವೇಳೆ ಚಿಂತಿಸಿದರೆ, ಆತನೇನಾದರೂ ಕಾಣಿಸುವನೇ? ಅದಕ್ಕಾಗಿ ಈ ಪ್ರಪಂಚದ 98% ಜನರು ಒಪ್ಪಿಕೊಂಡು ಜೀವನ ನಡೆಸುತ್ತಾರೆ. ಆದರೆ, ಅದು ನಿಜವಾದ ಒಪ್ಪಿಕೊಳ್ಳುವಿಕೆ ಅಲ್ಲ. ಒಪ್ಪಿಕೊಂಡ ಮೇಲೆ ಸಾಧಿಸಿ... ಶೋಧಿಸಿ... ಅನ್ವೇಷಿಸಿ... ಸತ್ಯವನ್ನು ಕಾಣಬೇಕು" ಎನ್ನುತ್ತಾರೆ ಅವರು.

ಈಗ ಒಂದು ಉದಾಹರಣೆಯನ್ನು ನೋಡೋಣ. ಈ ಪ್ರಪಂಚವಿರುವುದು ನಿಜವೇ ಎಂದರೆ ನೀವೆಲ್ಲ ಏನೆಂದು ಹೇಳುತ್ತೀರಿ "ನಿಜಾ... ನಿಜಾ..." ಎನ್ನುತ್ತೀರಲ್ಲವೇ ಯಾಕೆ? ನಿಜ

ಎಂದರೆ ನಾವು ನೀವೆಲ್ಲ ಜೀವಿಸಿದ್ದೇವೆ. ಅದಕ್ಕೆ, ನಿಜ ಎನ್ನುತ್ತೇವೆ. ಅಲ್ಲವೇ ? ಸರಿ ಹಾಗಾದರೆ ವೈರಸ್ ಮತ್ತು ಬ್ಯಾಕ್ಟೀರಿಯಾ ಹಾಗೂ ಇನ್ನಿತರ ಸೂಕ್ಷ್ಮ ಜೀವಿಗಳು ಇರುವುದು ನಿಜವೇ ಎಂದರೆ ನೀವೆನನ್ನುತ್ತೀರಿ "ನಿಜಾ...ನಿಜಾ..." ಎಂದು ಯಾಕೆಂದರೆ, ವೈದ್ಯಶಾಸ್ತ್ರವು ಹೇಳುತ್ತದೆ ಅದಕ್ಕಾಗಿ ಅಲ್ಲವೇ? ಯಾವುದೇ ಬ್ಯಾಕ್ಟೀರಿಯಾ ಅಥವಾ ವೈರಸ್‌ಗೆ ಮನುಷ್ಯನೇ ಆಗಲಿ ಯಾವುದೇ ಪ್ರಾಣಿಯೇ ಆಗಲಿ ಕಾಣಿಸುವುದೇ ಇಲ್ಲ, ಅದು ನಿಮಗೆ ಗೊತ್ತೇ ? ಒಬ್ಬ ಮನುಷ್ಯನ ಶರೀರದ ಈ ಕಡೆಯಿಂದ ಆ ಕಡೆಗೆ ಯಾವುದೇ ಬ್ಯಾಕ್ಟೀರಿಯಾ ಅಥವಾ ಸೂಕ್ಷ್ಮಜೀವಿ ತೂರಿ ಹೋಗುತ್ತವೆ. ನಮಗೆ ಸೂಕ್ಷ್ಮಜೀವಿ ಎಂಬುದು ಗೊತ್ತು ಅದಕ್ಕೆ ನಾವಿರುವುದು ಗೊತ್ತೇ ಇಲ್ಲ, ಅದು ಅಂದುಕೊಳ್ಳುತ್ತದೆ, ನಾನಿದ್ದೇನೆ ನನ್ನಂತಹ ಅನೇಕ ಸೂಕ್ಷ್ಮಜೀವಿಗಳಿವೆಯೇ ಹೊರತು ಈ ಪ್ರಪಂಚದಲ್ಲಿ ಬೇರೆ ಯಾರೂ ಇಲ್ಲ ಎಂದುಕೊಳ್ಳುತ್ತದೆ. ಆದರೆ, ಅದು ನಿಜವಾ ಎಂದರೆ, ಅದರ ಪಾಲಿಗೆ ಅದು ನಿಜ. ನಿಮಗೊಂದು ಪ್ರಶ್ನೆ ಬರಬಹುದು, ಹಾಗಾದರೆ, ಈ ವೈರಸ್ ಬ್ಯಾಕ್ಟೀರಿಯಾ ನಮ್ಮ ದೇಹದೊಳಗೆ ಹಾದು ಹೋಗುವುದರಿಂದ ನಮಗೆ ರೋಗಗಳು ಬರುವುದಿಲ್ಲವೇ ಎಂದು, ಎಲ್ಲಾ ಬ್ಯಾಕ್ಟೀರಿಯಗಳು ಕೆಟ್ಟದ್ದವುಗಳಲ್ಲ ಹಾಗೂ ನಮ್ಮ ಶರೀರದ ಪ್ರತಿ ಜೀವಕೋಶಕ್ಕೂ ಸಹ ರೋಗ ನಿರೋಧಕ ಶಕ್ತಿಯ ಕವಚವಿರುತ್ತದೆ. ಈ ರೋಗ ನಿರೋಧಕ ಶಕ್ತಿಯ ಕವಚದಲ್ಲಿರುವ ಜೀವಕೋಶಗಳಿಗೆ ಯಾವುದು ಕೆಟ್ಟ ಬ್ಯಾಕ್ಟೀರಿಯಾ ಮತ್ತು ಯಾವುದು ಒಳ್ಳೆಯ ಬ್ಯಾಕ್ಟೀರಿಯಾ ಎಂಬುದು ತಿಳಿಯುತ್ತದೆ. ಹಾಗೆ ತಿಳಿಯದೇ ಹೋದಾಗಲೇ ಖಾಯಿಲೆ ಶರೀರಕ್ಕೆ ಬರುತ್ತದೆ. ಇದನ್ನೇ ಇಮ್ಯುನ್ ಸಿಸ್ಟಮ್ ಎಂದು ಕರೆಯುತ್ತಾರೆ. ಅದಿರಲಿ ಈಗ ವಿಷಯಕ್ಕೆ ಬರೋಣ.

ನಮ್ಮ ದೇಹದ ಒಳಗೂ ಹೊರಗೂ ಅಡ್ಡಾಡಿಕೊಂಡಿರುವ ಸೂಕ್ಷ್ಮ ಜೀವಿಗಳಿಗೆ ನಾವು ಹೇಗೆ ಕಾಣುವುದಿಲ್ಲವೋ, ಹಾಗೆ ಪರಮಾತ್ಮನಲ್ಲಿಯೇ, ಆತನ ಅಂತರ್ಭಾಗದಲ್ಲಿಯೇ ಜೀವಿಸುತ್ತಿರುವ ನಮಗೆ ಆತ ಕಾಣುವುದೇ ಇಲ್ಲ, ಅದಕ್ಕಾಗಿಯೇ ಅಲ್ಲವೇ, ಅರ್ಜುನನಿಗೆ ವಿಶ್ವರೂಪ ದರ್ಶನವನ್ನು ತೋರಿಸುವಾಗ ವಿಶೇಷವಾದ ದೃಷ್ಟಿಯನ್ನು ಶ್ರೀಕೃಷ್ಣನು ಪ್ರಸಾದಿಸಿದ್ದು, ಇಲ್ಲವೆಂದರೆ, ಶ್ರೀಕೃಷ್ಣನ ವಿಶ್ವರೂಪವನ್ನು ಅರ್ಜುನನು ಎಂದಿಗಾದರೂ ದರ್ಶಿಸುತ್ತಿದ್ದನೆ ? ಅಷ್ಟೇ ಏಕೆ ಒಂದು ಇರುವೆ ಆನೆಯನ್ನು ಎಂದಿಗಾದರೂ ಸಂಪೂರ್ಣ ನೋಡಲಾದೀತೆ?

ನಮ್ಮ ದೈನಂದಿನ ಜೀವನವನ್ನು ಒಮ್ಮೆ ವೀಕ್ಷಿಸಿ ನೋಡಿ. ಬೆಳಿಗ್ಗೆ ಎದ್ದಾಗಿನಿಂದ ರಾತ್ರಿ ಮಲಗೋವರೆಗೂ ಸಹ ಎಲ್ಲಿ ಸಂತೋಷ ಸಿಗುವುದೋ ಎಂದು ಓಡುತ್ತಲೇ ಇದ್ದೇವೆ. ನಮಗೆ ನಮ್ಮನ್ನು ಹೊಗಳುವ ಸ್ನೇಹಿತರೇ ಬೇಕು. ರುಚಿ ರುಚಿಯಾಗಿರುವ ಊಟವೇ ಬೇಕು. ಆಹ್ಲಾದಕರ ವಾತಾವರಣವೇ ಬೇಕು. ನಮ್ಮಂತೆ ಕೇಳುವ ಹೆಂಡತಿ ಮಕ್ಕಳೇ ಬೇಕು. ನಾನು ಹೇಗೆಯೇ ಕೆಲಸ ಮಾಡಲಿ, ಆಫೀಸಿನಲ್ಲಿ ಬಾಸ್ ಸುಮ್ಮನಿರಬೇಕು. ವ್ಯಾಪಾರದಲ್ಲಿ ಲಾಭವೇ ಬರಬೇಕು ಮತ್ತು ರಾತ್ರಿ ಮಲಗಿದಾಗ ಸುಂದರವಾದ ಸ್ವಪ್ನಗಳೇ ಬೀಳಬೇಕು. ಏನಾದರೂ ಕೆಟ್ಟ ಸ್ವಪ್ನ ಕಾಣಿಸಿಕೊಂಡರೆ, ನಮಗೆ ಎಚ್ಚರವಾಗುವುದು ಖಂಡಿತ. ಇವೆಲ್ಲ ಯಾತಕ್ಕಾಗಿ ಎಂಬುದು ಆಲೋಚಿಸಿದರೆ, ನಿಮಗೆ ತಿಳಿಯುವುದು ಒಂದೇ ಒಂದು. ಅದು ಕೇವಲ ಸಂತೋಷಕ್ಕಾಗಿಯೇ ಎಂಬುದು. ಎಲ್ಲಿಯವರೆಗೆ ಈ ಓಟವೆಂಬುದನ್ನು ಒಂದು ದಿನವಾದರೂ, ಒಂದು ಕ್ಷಣವಾದರೂ ಆಲೋಚಿಸಿದ್ದೀರಾ ಅಥವಾ.... ಅದಕ್ಕಾಗಿ ನಮ್ಮ ಸಮಯ ಹಾಳು ಮಾಡಿಕೊಳ್ಳಬೇಕೇ ಎನ್ನುತ್ತೀರಾ ?

ಪ್ರತಿ ದಿನ ನಿಮಗಾಗಿ ಸ್ವಲ್ಪ ಸಮಯವನ್ನು ನೀವೇ ಮೀಸಲಿಡಿ. ಆ ಸಮಯದಲ್ಲಿ ಇದರ ಕುರಿತು ಆಲೋಚಿಸಲು ಪ್ರಾರಂಭಿಸಿ ಇದು ನಿರಂತರವಾಗಿ ನಡೆಯಲಿ. ನಂತರ ನಿಮಗೇ ತಿಳಿಯುತ್ತದೆ. ನಾನು ಓಡುತ್ತಿರುವುದು ಅಥವಾ ಹುಟ್ಟಿನಿಂದ ಇಲ್ಲಿಯವರೆಗಿನ ನನ್ನ ಪ್ರಯಾಣ ಎತ್ತ ಸಾಗುತ್ತಿದೆ ಎಂಬುದು ಈ ದೇಹಕ್ಕೆ ಇಷ್ಟು ವರ್ಷಗಳು ಎಂದು ಹೇಳಿಕೊಳ್ಳುತ್ತಿದ್ದೇನೆ ವಿನಃ ಇಷ್ಟು ವರ್ಷಗಳ ನನ್ನ ಸಮಯದಲ್ಲಿ ನಾನೇನು ಪಡೆದುಕೊಂಡೆ ಎಂಬುದನ್ನು ನೀವೇ ನೋಡಿಕೊಳ್ಳಿ. ನೀವು ನೂರು ಕೋಟಿ ಸಂಪಾದನೆ ಮಾಡಿರಬಹುದು. ಅದೂ ಕೂಡ ಸಂತೋಷಕ್ಕಾಗಿಯೇ ಹೊರತು ಮತ್ತಾವುದಕ್ಕಾಗಿ ? ಅದೂ ಹೋಗಲಿ, ನೂರು ಕೋಟಿ ಬಂದ ಮೇಲೆ ಏನಾದರೂ ನಿಂತುಕೊಂಡು ಸಮಾಧಾನದ ಉಸಿರು ಬಿಡುತ್ತಿದ್ದೀರಾ ಎಂದರೆ ಅದೂ ಇಲ್ಲ, ಹಾಗಾದರೆ, ಇಲ್ಲಿಯವರೆಗಿನ ನಿಮ್ಮ ಜೀವನದಲ್ಲಿ ಕೇವಲ ಸಂತೋಷಕ್ಕಾಗಿಯೇ ಓಡುತ್ತಿದ್ದರೆ ಅಥವಾ ಪ್ರತಿ ಸಂತೋಷದಿಂದ ಇನ್ನೊಂದು ಸಂತೋಷಕ್ಕೆ ಹಾರುತ್ತಿದ್ದರೆ, ಈಗಾಗಲೇ ನಿಮಗನ್ನಿಸಿರಬೇಕು ಎಲ್ಲಿಯವರೆಗೆ ಈ ಹಾರಾಟವೆಂದು. ಹಾಗಾಂತ, ನೀವು ಮಾಡುತ್ತಿರುವ ವ್ಯಾಪಾರ ವ್ಯವಹಾರ ವೃತ್ತಿ ನಿಲ್ಲಿಸಿರೆಂದು ಅರ್ಥವಲ್ಲ, ಅವೆಲ್ಲವನ್ನು ಮಾಡುತ್ತಲೇ ಇದರ ಕುರಿತು, ಅಂದರೆ, ಶಾಶ್ವತವಾದ ಆನಂದದ

ಕುರಿತು ಚಿಂತನೆಯನ್ನು ಪ್ರಾರಂಭಿಸಿ ಆಗ ಪರಮಾತ್ಮನ ಅನ್ವೇಷಣೆ ಪ್ರಾರಂಭವಾಗುತ್ತದೆ. ಪರಮಾತ್ಮನ ಅನ್ವೇಷಣೆಗಾಗಿ ಹೊರಗೆಲ್ಲೊ ಹುಡುಕಿದರೆ ಆತನ ಸುಳಿವು ಸಹ ಸಿಗುವುದಿಲ್ಲ ನಿಮ್ಮ ಒಳಗೇ ಹುಡುಕಿರಿ.

ಒಮ್ಮೆ ವಿದ್ಯುತ್ ಕಂಬದ ಕೆಳಗೆ ವಿದ್ಯುತ್ ದೀಪದ ಬೆಳಕಿನಲ್ಲಿ ಒಬ್ಬನು ಏನನ್ನೋ ಹುಡುಕುತ್ತಿದ್ದ. ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬಾತ ಇದನ್ನು ನೋಡಿದ ಹಾಗೂ ಪ್ರಶ್ನಿಸಿದ ''ಸ್ವಾಮಿ ತಾವು ಏನನ್ನಾದರೂ ಕಳೆದುಕೊಂಡಿದ್ದೀರಾ, ನನಗೂ ತಿಳಿಸಿರಿ ನಾನು ಸಹಾಯ ಮಾಡುತ್ತೇನೆ ಎಂದ'' ಅದಕ್ಕೆ ಆತನು "ನನ್ನ ಕೀ ಚೈನ್ ಕಳೆದಿದೆ ಅದಕ್ಕೆ ಹುಡುಕುತ್ತಿದ್ದೇನೆ" ಎಂದ. ಅದಕ್ಕೆ ಈತನೂ ಸಹ ಹುಡುಕಲು ಪ್ರಾರಂಭಿಸಿದ. ಇಬ್ಬರೂ ಸೇರಿ ಸುಮಾರು ಹೊತ್ತು ಹುಡುಕಿದರು ಪ್ರತಿ ಅಣು ಅಣುವನ್ನು ಶೋಧಿಸಿದರು. ಆದರೆ ಸಿಗಲಿಲ್ಲ. ಆಗ ಪ್ರಯಾಣಿಕ ಕೇಳಿದ "ಸುಮಾರು ಹೊತ್ತಿನಿಂದ ಹುಡುಕುತ್ತಿದ್ದೇವೆ ಪ್ರತಿ ಅಣು ಅಣುವು ಶೋಧಿಸಿದೆವು ನಿಮ್ಮ ಕೀ ಚೈನ್ ಸಿಗಲಿಲ್ಲ ನೀವು ಜ್ಞಾಪಕ ಮಾಡಿಕೊಳ್ಳಿ ಕಳೆದುಕೊಂಡಿದ್ದು ಎಲ್ಲಿ ?" ಎಂದು ಕೇಳಿದ. ಅದಕ್ಕೆ ಆತ ಹೇಳಿದ, ಕೀ ಚೈನ್ ಕಳೆದುಕೊಂಡದ್ದು ಮನೆಯಲ್ಲಿ, ಆದರೆ, ಅಲ್ಲಿ ಕತ್ತಲೆ ಇದೆ ಅದಕ್ಕಾಗಿ ಈ ಬೆಳಕಿನಲ್ಲಿ ಹುಡುಕುತ್ತಿದ್ದೇನೆ ಎಂದ. ಎಲ್ಲರ ಕಥೆಯೂ ಇದೇ ರೀತಿಯೇ ಇದೆ. ಒಳಗಡೆ ಇರುವುದನ್ನು ಹೊರಗಡೆ ಹುಡುಕಿದರೆ ಸಿಗುವುದೇ. ಆತನಿಗೆ ನಿಜವಾಗಲೂ ಕೀ ಚೈನ್ ಬೇಕಿದ್ದರೆ, ಕತ್ತಲಾಗಿರುವ ತನ್ನ ಮನೆಯನ್ನು ಬೆಳಕು ಮಾಡಿಕೊಳ್ಳಬೇಕು. ನಂತರ ಅದೇ ಸಿಗುತ್ತದೆ. ಅದೇ ರೀತಿ ನಮ್ಮ ಮನಸ್ಸೆಲ್ಲವೂ ಕತ್ತಲು ತುಂಬಿಕೊಂಡರೆ, ಪರಮಾತ್ಮನ ಸುಳಿವು ಸಿಗುವುದೇ? ಮೊದಲು ಮನಸ್ಸನ್ನು ಬೆಳಕಿನಿಂದ ತುಂಬಿಸಬೇಕು. ನಮ್ಮ ಮನಸ್ಸಿನ ಬಗ್ಗೆ ನಮ್ಮಲ್ಲಿ ಸರಿಯಾದ ಅರಿವು ಮೂಡಬೇಕು. ಮನಸ್ಸೆಂಬುದು ಕೆಟ್ಟದು, ಇದನ್ನು ಗೆಲ್ಲಬೇಕು, ಇದು ಹೇಳಿದಂತೆ ಕೇಳಬಾರದು, ಇದರಿಂದಲೇ ಅನರ್ಥ ಎಂಬುದನ್ನು ಬಿಡಬೇಕು. ಮನಸ್ಸನ್ನು ಎಂದೆಂದಿಗೂ ಗೆಲ್ಲಲು ಸಾಧ್ಯವಿಲ್ಲ, ಅದನ್ನು ಸ್ನೇಹಿತನನ್ನಾಗಿ ಪರಿವರ್ತಿಸಿಕೊಳ್ಳಬೇಕು. ಯಾರನ್ನಾದರೂ ಶತ್ರುವೆಂದು ಭಾವಿಸಿದರೆ, ಎಂದಾದರೂ ಅವರನ್ನು ಗೆಲ್ಲಲು ಸಾಧ್ಯವೇ? ಒಂದು ವೇಳೆ ಗೆದ್ದರೂ, ಅದು ತಾತ್ಕಾಲಿಕವಲ್ಲವೇ ? ಅದಕ್ಕಾಗಿ ಮೊದಲು ನಿಮ್ಮ ಮನಸ್ಸಿನ ಬಗ್ಗೆ ಶೋಧನೆ ಪ್ರಾರಂಭವಾಗಲಿ. ಈ ಶೋಧನೆಯೇ ಪರಮಾತ್ಮನ ಕುರಿತು ಅನ್ವೇಷಿಸಲು ಪ್ರಾರಂಭವಾಗುತ್ತದೆ. ಈ ಮನಸ್ಸಿನ ಕುರಿತು ತಿಳಿಸುವ ಸಲುವಾಗಿಯೇ ನಾವು **"ಲೈಫ್ ಈಜ್ ಬ್ಯೂಟಿಫುಲ್"** ಅಥವಾ **"ಸುಮಧುರವೇ ಜೀವನ"** ಎಂಬ ಎರಡು ದಿನದ ಶಿಬಿರವನ್ನು ನಡೆಸುತ್ತಿದ್ದೇವೆ. ಯಶಸ್ಸು ಎನ್ನುವುದನ್ನು ಹೇಗೆ ಸಾಧಿಸಬೇಕು? ಸಾಧಿಸಲು ಬೇಕಾಗುವ ಸಾಧನಗಳಾವುವು ? ಶಾಶ್ವತವಾದ ಯಶಸ್ಸು ಯಾವುದು ? ಇದರಿಂದ ಆನಂದ ಹೇಗೆ ದೊರೆಯುತ್ತದೆ ಎಂಬುದನ್ನು ಈ ಎರಡು ದಿನದಲ್ಲಿ ತಿಳಿದುಕೊಳ್ಳಬಹುದು. ನೀವು ಭಾಗವಹಿಸಿದರೆ, ನಿಮಗೇ ತಿಳಿಯುತ್ತದೆ. ಹಾಗಂತ ನಾನಾಗಲೇ ಕಂಡು ಕೊಂಡಿದ್ದೇನೆಂದು ಅರ್ಥವಲ್ಲ ನಾನು ಅನ್ವೇಷಣೆ ಪ್ರಾರಂಭ ಮಾಡಿದ್ದೇನೆ. ಅದನ್ನೇ ನಿಮಗೂ ತಿಳಿಸುವ ಕುತೂಹಲ ನನ್ನದು, ಬನ್ನಿ ಒಮ್ಮೆ ಈ ಶಿಬಿರದಲ್ಲಿ ಭಾಗವಹಿಸಿ.

- ಶ್ರೀ ಕೆ. ಭೀಮೇಶ್ ರೆಡ್ಡಿ, ಅಧ್ಯಕ್ಷರು
ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್ (ರಿ)
ಬೆಂಗಳೂರು

"ಸುಮಧುರವೇ ಜೀವನ"

Life is Beautiful

ENJOYMENT SCIENCE TEACHING PROGRAMME

Date : Sept 12th & 13th 2009 Time : 9.30 am to 5 pm

Venue:
Karnataka Pyramid Dhyana Prachara Trust ®
#126,2nd Floor, 4th Block,Jayanagar,Bangalore 560011

Entry Donation :Rs 500 /-

Contact no. 9481359920, 9738462773

**ಈ ಶಿಬಿರದಲ್ಲಿ ಏಕೆ ಪಾಲ್ಗೊಳ್ಳಬೇಕು?**

1. ಜೀವನದಲ್ಲಿ ಯಶಸ್ಸು ಪಡೆಯಲು.
2. ಯಶಸ್ಸು ಎಂಬುದು ಮನಸ್ಸಿಗೆ ಸಂಬಂಧ ಪಟ್ಟದ್ದು.
3. ಮನಸ್ಸನ್ನು ತಿಳಿದರೆ ಮಹದೇವನನ್ನು ತಿಳಿದಂತೆ.
4. ನಿಮ್ಮ ಮನಸ್ಸೇ ನಿಮ್ಮ ಜೀವನಕ್ಕೆ ಮೂಲಾಧಾರವಾದುದು.
5. ಮನಸ್ಸಿನ ಕುರಿತು ತಿಳಿಯದಿದ್ದರೆ, ಜೀವನದ ಕುರಿತು ತಿಳಿಯಲಾಗುವುದಿಲ್ಲ.
6. ಈ ಶಿಬಿರದಲ್ಲಿ ತಿಳಿಸಿಕೊಡುವ ವಿಷಯಗಳು ನಿಮ್ಮ ಜೀವನದಲ್ಲಿ ಕೇವಲ ಯಶಸ್ಸನ್ನು ಮಾತ್ರವಲ್ಲದೆ ಮೌಲ್ಯಾಧಾರಿತವಾದ ಜೀವನ ನಡೆಸಲು ಸಹಾಯಕಾರಿಯಾಗುತ್ತದೆ.

ಒಮ್ಮೆ ಭಾಗವಹಿಸಿ ನೋಡಿ ನಿಮಗೇ ತಿಳಿಯುತ್ತದೆ.

# ಓಶೋ ಕಥೆ



## '' ಮನಸ್ಸು ಹಾಗೂ ಮನವರಿಕೆ ''

ಒಂದು ಸಂಜೆಯ ಹೊತ್ತು ಗೌತಮ ಬುದ್ಧರು ತಮ್ಮ ಶಿಷ್ಯರಿಗೆ ಸತ್ಯಬೋಧನೆ ಮಾಡುತ್ತಿದ್ದರು. ಇದು ಪ್ರತಿ ದಿನದ ಪದ್ಧತಿಯಾಗಿತ್ತು. ಆತನ ಹಿತಬೋಧನೆ ಹಾಗೂ ಅದರ ಅಮೃತವಾಣಿ ಬಹಳ ಜನರನ್ನು ಸೆಳೆಯುತ್ತಿತ್ತು. ಬುದ್ಧ ತನ್ನ ಬೋಧನೆಯನ್ನು ಮುಗಿಸುವಾಗ ತನ್ನ ಶಿಷ್ಯರನ್ನು ಉದ್ದೇಶಿಸಿ ''ನೀವೆಲ್ಲರೂ ಇನ್ನು ಹೊರಡಿ. ಆದರೆ, ನಿದ್ದೆ ಮಾಡುವ ಮುನ್ನ ನೀವು ಮಾಡಬೇಕಾದ ಮುಖ್ಯವಾದ ಕೆಲಸವನ್ನು ಮರೆಯಬೇಡಿರಿ''. ಎಂದು ಹೇಳುವುದು ರೂಢಿಯಾಗಿತ್ತು. ಅಂದೊಂದು ಸಂಜೆ ಬುದ್ಧನು ಪ್ರವಚನವನ್ನು ಮಾಡುತ್ತಿದ್ದಾಗ, ಅಲ್ಲೇ ಮರೆಯಲ್ಲಿ ನಿಂತು ಒಬ್ಬ ಕಳ್ಳನು ಕೇಳಿಸಿಕೊಳ್ಳುತ್ತಿದ್ದ. ಹಾಗೆಯೇ, ಇನ್ನೂ ಸ್ವಲ್ಪ ದೂರದಲ್ಲಿ ಓರ್ವ ವೇಶ್ಯೆಯು ಕತ್ತಲಲ್ಲಿ ನಿಂತು ಕೇಳಿಸಿಕೊಳ್ಳುತ್ತಿದ್ದಳು. ಬುದ್ಧನ ಪ್ರವಚನ ಬಲು ಸೊಗಸಾಗಿತ್ತು ಅವರಿಬ್ಬರ ಮನಸ್ಸಿಗೆ ಮುದ ತಂದಿತು. ಬೋಧನೆಯ ಕೊನೆಯಲ್ಲಿ ಎಂದಿನಂತೆ ಬುದ್ಧನು '' ನೀವೆಲ್ಲರು ಇನ್ನು ಹೊರಡಿ. ಆದರೆ, ನಿದ್ದೆ ಮಾಡುವ ಮುನ್ನ ನೀವು ಮಾಡಬೇಕಾದ ಮುಖ್ಯವಾದ ಕೆಲಸವನ್ನು ಮರೆಯಬೇಡಿರಿ '' ಕಳ್ಳನಿಗೆ ಪರಮಾಶ್ಚರ್ಯವಾಯಿತು. ''ಈತನು ಬಲು ಅಪಾಯಕಾರಿ ಮನುಷ್ಯ - ಮತ್ತೆ ಈತನಿಗೆ ನಾನು ಕಳ್ಳ ಎಂಬ ವಿಷಯ ಹೇಗೆ ತಿಳಿಯಿತು. ಅದೂ ಅಲ್ಲದೆ, ನನ್ನ ಕಸುಬು ರಾತ್ರಿಯ ವೇಳೆಯಲ್ಲೇ ಮಾಡುವಂಥದ್ದು ಎಂದು ಖಚಿತವಾಗಿ ಹೇಗೆ ಹೇಳಬಲ್ಲವನಾಗಿದ್ದಾನೆ'' ಎಂದುಕೊಂಡ. ಮರೆಯಲ್ಲಿ ನಿಂತು ಕೇಳುತ್ತಿದ್ದ ವೇಶ್ಯೆಗಂತೂ ಮೈಯಲ್ಲಿ ನಡುಕ ಉಂಟಾಯಿತು. ಈತನ್ಯಾರೋ ತ್ರಿಕಾಲ ಜ್ಞಾನಿಯೇ ಸರಿ. ಹಾಗಿಲ್ಲವಾದಲ್ಲಿ, ನನ್ನ ವ್ಯಾಪಾರವು ಕತ್ತಲು ಕವಿದ ಮೇಲೆ ಎಂದು ಸ್ಪಷ್ಟವಾಗಿ ಹೇಗೆ ನುಡಿಯಲು ಸಾಧ್ಯ ಎಂದು ಆಶ್ಚರ್ಯಪಟ್ಟಳು. ನಿಜಸಂಗತಿ ಏನೆಂದರೆ, ಬುದ್ಧನು ತನ್ನ ಶಿಷ್ಯರಿಗೆ ಧ್ಯಾನ ವಿದ್ಯೆಯನ್ನು ಕಲಿಸುತ್ತಿದ್ದ. ಮಲಗುವ ಮುನ್ನ ಶಿಷ್ಯರೆಲ್ಲರೂ ಧ್ಯಾನಾಭ್ಯಾಸ ಮಾಡಿ ನಂತರ ಮಲಗಬೇಕೆಂದು ಆತನ ಮಾತಿನ ಅರ್ಥ. ಆದರೆ, ಆಧ್ಯಾತ್ಮಿಕತೆ ಬಗ್ಗೆ ಸ್ವಲ್ಪವೂ ಅರಿಯದ ಕಳ್ಳ ಮತ್ತು ವೇಶ್ಯೆಗೆ ಅವರವರಿಗೆ ತಿಳಿದಿರುವ ಮಟ್ಟಿಗೆ ಬುದ್ಧನ ಮಾತನ್ನು ಅರ್ಥೈಸಿಕೊಂಡರು. ಕಳ್ಳತನ ಹಾಗೂ ವೇಶ್ಯಾ ವೃತ್ತಿಯನ್ನು ಬಿಟ್ಟರೆ ಅವರಿಗೆ ಧ್ಯಾನಾಭ್ಯಾಸದ ಬಗ್ಗೆ ಗೊತ್ತಿರಲಿಲ್ಲ, ಇದರಲ್ಲಿ ಅವರ ತಪ್ಪೇನೂ ಇಲ್ಲ. ಮನಸ್ಸಿಗೆ ಗೋಚರಿಸದ ವಿಷಯಗಳು ಅಪರಿಮಿತವಾಗಿ ಇರುತ್ತವೆ. ಮನಸ್ಸು ಬಲು ಚುರುಕಾಗಿ ನಮಗೆ ಬಲ್ಲಷ್ಟು ವಿಷಯಗಳಿಗೆ ಮಾತ್ರ ನಮ್ಮನ್ನು ಸೀಮಿತಗೊಳಿಸಿ, ನಮ್ಮಲ್ಲಿ ಪರಿಪೂರ್ಣತೆಯ ಭಾವನೆಯನ್ನು ಉಂಟುಮಾಡುತ್ತದೆ. ತನಗೆ ಎಟುಕದ ವಿಷಯಗಳನ್ನು ಬಂಧಿಸಿ, ತನ್ನದೇ ಆದ ನಿಬಂಧನೆಗಳನ್ನು ಹಾಕಿಕೊಳ್ಳುತ್ತದೆ. ಕಣ್ಣಿಗೆ ಕಾಣಿಸದೆ ಇರುವುದು ಹಾಗೂ ಇಂದ್ರಿಯ ಗೋಚರವಲ್ಲದ ಹೊರತು ಮತ್ತಿನ್ನಾವ ಸತ್ಯವೂ ಇಲ್ಲವೆಂದು ವಾದ ಮಾಡುವುದು ಮನಸ್ಸಿನ ಮುರ್ಖತಾ ವಿಶೇಷ. ಅನುಮಾನಿಸುವುದು ಇದರ ಗುಣ ಆದಾದ ಮೇಲೆ ತರ್ಕಕ್ಕೆ ಸಿಲುಕಿಸಿ ದ್ವಂದ್ವವನ್ನುಂಟು ಮಾಡಿ, ಅತಿ ಮುಗ್ಧತೆಯಿಂದ ಮನುಷ್ಯನನ್ನು ಅಚೇತನಾವಸ್ಥೆಗೆ ತಳ್ಳಿ ಬಿಡುತ್ತದೆ. ಇದರಿಂದ, ತಾನು ಸರಿಯಾದ ನಿರ್ಧಾರಕ್ಕೆ ಬರಲಾಗದೆ, ಮನಸ್ಸನ್ನು ಅವಲಂಬಿಸಿ ಜೀವಿಸುತ್ತಿರುವ ಕಾರಣ ಪಾಪ ಪ್ರಜ್ಞೆಯಲ್ಲಿ ಸಿಲುಕಿ, ಯಾರು ಏನು ಹೇಳಿದರೂ, ಅದು ತನ್ನನ್ನು ಉದ್ದೇಶಿಸಿಯೇ ಎಂದು ತಿಳಿದು ತಳಮಳಗೊಳ್ಳುತ್ತಿರುತ್ತಾನೆ. ಹಲವು ರೀತಿಯಲ್ಲಿ ಸೀಮಿತಗೊಂಡಿರುವ ಮನಸ್ಸಿನ ಆಧಾರದ ಮೇಲೆ ಜೀವಿಸುತ್ತಿರುವ ಜನರು ಜ್ಞಾನಿಗಳಾಗಲು ಅಸಾಧ್ಯ. ಏಕೆಂದರೆ, ಆತ್ಮೋನ್ನತಿಗೆ ಬೇಕಾಗಿರುವ ಯೋಗ ಪರಂಪರೆ ಅದಕ್ಕೆ ಬೇಡವಾದ ಶ್ರೋತೃವಾಗಬೇಕು. (ಕೇಳಿಸಿಕೊಳ್ಳುವುದು ಮಾತ್ರವಲ್ಲ, ಹೃದಯದಿಂದ ಆಲಿಸುವುದು). ಜ್ಞಾನಶಕ್ತಿ ಉಳ್ಳವರು ಗುರುವಾಣಿಯನ್ನು ಹೃದಯದಿಂದ ಆಲಿಸಿ ಅದರಲ್ಲಿ ಅಡಗಿರು ಸೂಕ್ಷ್ಮ ಅರ್ಥಗಳನ್ನು ಸವಿಯುವುದು ಬಲು ಮುಖ್ಯವಾದ್ದು, ಅದರಲ್ಲೂ ಗುರುವಿನ ಉದ್ದೇಶವನ್ನು ಅರ್ಥ ಮಾಡಿಕೊಳ್ಳಬೇಕಾದರೆ, ಹೃದಯದ ಬಾಗಿಲು ತೆಗೆದಿರಬೇಕು. ಮನಸ್ಸಿನ ವಿಕಾರ ಪ್ರವೃತ್ತಿಗಳನ್ನು ಲೆಕ್ಕಿಸದೆ, ಗುರುವಿನ ಅಮೃತವಾಣಿಯನ್ನು ಹೃದಯದಲ್ಲಿ ತುಂಬಿಸುವಲ್ಲಿ ಯಶಸ್ವಿಯಾಗಬೇಕು. ಆಗ ನಮ್ಮನ್ನು ಕವಿದಿರುವ ಕತ್ತಲೆಯು ತಾನೇ ತಾನಾಗಿ ಕರಗಿ ಜ್ಞಾನ ಜ್ಯೋತಿಯು ಬೆಳಗುತ್ತದೆ. ಆಗ ನಮ್ಮನ್ನು ಆವರಿಸಿರುವ ಪಾಪ ಪ್ರಜ್ಞೆಯು ತೊಲಗಿ ನಾವು ಕೇವಲ ಶರೀರಧಾರಿಗಳೆಂಬ ತಪ್ಪು ತಿಳುವಳಿಕೆ ಮಾಯವಾಗಿ ನಾವು ಅಮರರು ನಾವು ಬೆಳಕಿನ ಸ್ವರೂಪರು, ಸತ್ಯವಾಕ್ಯವು ನಮ್ಮ ಮನಸ್ಸಿಗೆ ಗೋಚರವಾಗುತ್ತದೆ. ಇದಕ್ಕೆ ಮುಂಚೆ ನಮ್ಮ ಮನಸ್ಸು ಮಾಡುತ್ತಿದ್ದ ಚೇಷ್ಟೆಗಳು ಇಲ್ಲವಾಗಿ, ಈಗ ನಮ್ಮ ಆತ್ಮೋನ್ನತಿಗೆ ಪೂರಕವಾಗಿ ನಿಂತು ಯಾವ ತಡೆಯೂ ಇಲ್ಲದೆ ಗುರುವಿನ ಮಾತುಗಳನ್ನು ನೇರವಾಗಿ ಹೃದಯಕ್ಕೆ ತಲುಪಿಸಿ ಆನಂದವನ್ನು ಉಂಟುಮಾಡುತ್ತದೆ.

ಅನುವಾದ : ನಿರ್ಮಲ ಶ್ರೀನಿವಾಸ್
ಬೆಂಗಳೂರು.

# ಪಾಂಡಿಚೇರಿಯಲ್ಲಿ ಪಿರಮಿಡ್‌ಗಳ ಹಬ್ಬ



14ನೇ ಆಗಸ್ಟ್ ಪಾಂಡಿಚೇರಿಯಲ್ಲಿ ಸುಮಾರು ಬೆಳಗ್ಗೆ 10 ಘಂಟೆಗೆ ಶ್ರೀ ಆಚಾರ್ಯ ವಿದ್ಯಾಸಂಸ್ಥೆಯ ನಿರ್ಮಾಪಕರಾದ ಶ್ರಿ ಅರವಿಂದನ್‌ರವರು 5 ಪಿರಮಿಡ್ ಕಟ್ಟಡಗಳನ್ನು (ಒಂದೊಂದು 20X20) ನಿರ್ಮಾಣ ಮಾಡಿದರು. ಇದನ್ನು ಶ್ರೀ ಪತ್ರೀಜೀಯವರು ಪ್ರಾರಂಭ ಮಾಡಿ, ಅಲ್ಲಿನ ಸದಸ್ಯರಿಗೆ ಧ್ಯಾನದ ಬಗ್ಗೆ ಮಾಹಿತಿ ನೀಡಿದರು. ಈ ಸಮಾರಂಭದಲ್ಲಿ ಚೆನ್ನೈಯಿಂದ ಸುಮಾರು 50 ಜನ ಸದಸ್ಯರು ಪಾಲ್ಗೊಂಡಿದ್ದರು. ಹಾಗೂ ಬೆಂಗಳೂರಿನಿಂದ ಟ್ರಸ್ಟ್‌ನ ಸದಸ್ಯರಾದ ಶ್ರೀ ಐ.ವಿ. ರೆಡ್ಡಿ ಮತ್ತು ಪ್ರಸಾದ್‌ರವರು ಉಪಸ್ಥಿತರಿದ್ದರು. ಈ ಸುಂದರವಾದ ಕಟ್ಟಡಕ್ಕೆ ಶ್ರೀ ಪತ್ರೀಜಿಯವರು ಅನಂತ ಅಭಿನಂದನೆಯನ್ನು ಸಲ್ಲಿಸಿದರು. ತದನಂತರ, ಅವರು ನಮ್ಮ ಶರೀರದಲ್ಲಿರುವ 5 ಬೆರಳುಗಳ ಬಗ್ಗೆ ಜ್ಞಾನವನ್ನು ನೀಡಿದರು.

1. ಚಿಕ್ಕ ಬೆರಳು – ಅಹಿಂಸೆ–ಶರೀರ–ಅಹಂದೇಹೋಸ್ಮಿ–ಕುಂಭಕರ್ಣ
2. ಉಂಗುರದ ಬೆರಳು–ತಟಸ್ಥ ಮನಸ್ಸು ಅಹಂ ಮನೋಸ್ಮಿ–ರಾವಣ
3. ಮಧ್ಯದ ಬೆರಳು – ಸ್ವಾಧ್ಯಾಯ ಸಜ್ಜನ ಸಾಂಗತ್ಯ – ಬುದ್ಧಿ – ಅಹಂ ಬುದ್ಧೋಸ್ಮಿ – ವಿಭೀಷಣ – ಮಧ್ಯದ ಬೆರಳು
4. ತೋರುಬೆರಳು – ಧ್ಯಾನ ಮಾಡುವುದು, ಆತ್ಮ – ಆತ್ಮ ಅಹಂ ಆತ್ಮೋಸ್ಮಿ– ಹನುಮಂತ
5. ಹೆಬ್ಬೆರಳು – ಧ್ಯಾನ ಕಲಿಸುವಿಕೆ, ದೈವತ್ವ ದೈವತ್ವ ಅಹಂ ಬ್ರಹ್ಮಾಸ್ಮಿ – ಶ್ರೀ ರಾಮ

ಮತ್ತೆ 60X60 ಪಿರಮಿಡ್‌ಗಾಗಿ ತಳಹದಿ ಹಾಕುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ಈ ಪಿರಮಿಡ್‌ಗಳನ್ನು ನಿರ್ಮಾಣ ಮಾಡಲು ಹೈದರಾಬಾದ್‌ನಿಂದ ನಿಪುಣ, ಪಾರಂಗತರಾದ ಶ್ರೀ ರಾಜನ್ ಮತ್ತು ಶ್ರೀ ಲಕ್ಷ್ಮಿಯವರನ್ನು ರವರ ಪ್ರೇರಣೆ,ಉತ್ತೇಜನ, ಈ ವಿದ್ಯಾಸಂಸ್ಥೆಯ ಮತ್ತು ಶಾಲೆಯ ವಾಸ್ತು ಶಾಸ್ತ್ರಜ್ಞರಾದ ಶ್ರೀ ರಾಜನ್‌ರವರ ದಾರಿದೀಪವೇ ಈ ಪಿರಮಿಡ್‌ಗಳ ನಿರ್ಮಾಣಕ್ಕೆ ಮೀಸಲಾಯಿತು. ಹಾಗೂ PYMA ಮಾಸ್ಟರ್ ಪ್ರದೀಪ್‌ರವರ ಪಾತ್ರವು ಇದಕ್ಕೆ ಸಮರ್ಥನೀಯ ಮತ್ತು ನ್ಯಾಯ ಸಮ್ಮತದಿಂದ ಒಪ್ಪಿಸಲಾಯಿತು.

ಅಧಿವೇಶನದ ಸಭೆಯ ನಂತರ, ಧ್ಯಾನದ ಮಾಹಿತಿಯನ್ನು 10, 11, 12 ನೇ ತರಗತಿಯ ವಿದ್ಯಾರ್ಥಿಗಳಿಗೆ ನೀಡಲಾಯಿತು. ಶ್ರೀ ಪತ್ರೀಜಿಯವರು ಕೆಲವು ಮಾಸ್ಟರುಗಳಿಗೆ ಅವರ ಅನುಭವಗಳನ್ನು ಹಂಚಿಕೊಳ್ಳಲು ಕೇಳಿಕೊಂಡರು. ಮಾಸ್ಟರುಗಳ ಜೊತೆಯಲ್ಲಿ ಶ್ರೀ ಪತ್ರೀಜಿ ಯವರು ಪಾಲ್ಗೊಂಡರು.

ಶ್ರೀ ಅರವಿಂದನ್‌ರವರು ತಮ್ಮ ಭಾಷಣದಲ್ಲಿ ಈ ಹೇಳಿಕೆಯನ್ನು ನೀಡಿದರು.

ಪ್ರತಿಯೊಂದು ದೇವಸ್ಥಾನದಲ್ಲಿ ಪರಮಾತ್ಮ ಇದ್ದಾನೆಂದು ನೀವು ಹೇಗೆ ತಿಳಿಯುತ್ತೀರೋ, ಅದೇ ರೀತಿ ಈ ಪಿರಮಿಡ್‌ನಲ್ಲಿ ಸಹ ಪರಮಾತ್ಮನು ನೆಲಸಿದ್ದಾನೆ ಎಂದು ತಿಳಿಸಿದರು. ಆದ್ದರಿಂದ, ಪ್ರತಿಯೊಬ್ಬರೂ ಪ್ರತಿದಿನ ಧ್ಯಾನ ಮಾಡಲೇಬೇಕು. ಶ್ರೀ ಪತ್ರೀಜಿ ಯವರು ಪ್ರತಿಯೊಬ್ಬ ಮನುಷ್ಯನೂ ಧ್ಯಾನ ಮಾಡಿದರೆ ದೇವರಾಗುತ್ತಾನೆ ಎಂದು ತಿಳಿಸಿದರು.

ಇಲ್ಲಿ ಬಂದಿರುವವರಲ್ಲಿ ಎಷ್ಟು ಜನಗಳು ಮಾಂಸಾಹಾರಿಗಳಿದ್ದೀರಾ ಎಂದು ಕೇಳಿದಾಗ ಸುಮಾರು 90% ಭಾಗ ವಿದ್ಯಾರ್ಥಿಗಳು ಮಾಂಸಾಹಾರಿಗಳೆಂದು ಕೈ ಎತ್ತಿದರು. ಶಾಕಾಹಾರಿಗಳಾಗಲು ಇಚ್ಛಿಸುವಿರೋ? ಬನ್ನಿ ನಾನು ಹೇಳಿದ





ಹಾಗೆ ಪ್ರಮಾಣ ಮಾಡಿ ಎಂದಾಗ ಸುಮಾರು ವಿದ್ಯಾರ್ಥಿಗಳು ತಾವುಗಳು ಈ ದಿವಸದಿಂದ ಶಾಕಾಹಾರಿಗಳಾಗುತ್ತೇವೆಂದು ಪ್ರಮಾಣ ಮಾಡಿದರು.

ಎಲ್ಲರೂ 2 ನಿಮಿಷಗಳ ಕಾಲ ಮೌನವಾಗಿರಿ ಮತ್ತು ನನ್ನನ್ನು ಗಮನಿಸಿ ಎಂದು ಅವರು ತಿಳಿಸಿದರು. ನಾನು ಶಕ್ತಿ ಎನ್ನುತ್ತಿದ್ದಂತೆಯೇ ಪೂರ್ತಿ ಕೋಣೆಯು ಮೌನವಾಯಿತು. ಅವರು ಮೌನ ಹೇಗಿತ್ತು ಎಂದು ಕೇಳಿದರು. ಬಹಳ ಶಕ್ತಿಯನ್ನು ಕೊಡುತ್ತದೆ. ಧ್ಯಾನ ಅದಕ್ಕಿಂತಾ ಸಾವಿರಾರು ಪಟ್ಟು ಜಾಸ್ತಿ. ಆದ್ದರಿಂದ, ಎಲ್ಲರೂ ಪ್ರತಿದಿನ ಧ್ಯಾನ ಮಾಡಬೇಕು. ಪತ್ರೀಜಿಯವರು ತಿಳಿಸಿದರು. ''ಆನಾಪಾನಾಸತಿ'' ಧ್ಯಾನವು ಬಹಳ ಸರಳ ಮತ್ತು ಪರಿಣಾಮಕಾರಿಯಾಗಿದೆ. ವಿದ್ಯಾರ್ಥಿಗಳು ಪ್ರತಿದಿವಸ 30 ನಿಮಿಷಗಳಷ್ಟು ಕಾಲ ಧ್ಯಾನ ಮಾಡಬೇಕು ಎಂದು ಪತ್ರೀಜಿಯವರು ತಿಳಿಸಿದರು. ಧ್ಯಾನದಲ್ಲಿ 7 ವಿವಿಧ ತರಹದ ಅನುಭವಗಳಿವೆ.

ಪ್ರತಿಯೊಬ್ಬರೂ ತಮ್ಮ ಚಿಕ್ಕ ವಯಸ್ಸಿನಲ್ಲಿಯೇ, ವಿಜ್ಞಾನ ಫುಟ್‌ಬಾಲ್, ಕ್ರಿಕೆಟ್ ಕಲಿತಂತೆ, ಧ್ಯಾನವನ್ನು ಸಹ ಅಭ್ಯಾಸ ಮಾಡಬೇಕು. ಶ್ರೀ ಕೃಷ್ಣನೂ ಸಹ ಸಣ್ಣ ವಯಸ್ಸಿನಲ್ಲಿಯೇ ಅವನ ಗುರು ಸಾಂದೀಪರ ಬಳಿ ಕಲಿತುಕೊಂಡನು ಮತ್ತು ದಿವಸ ಪೂರ್ತಿ ಧ್ಯಾನ ಮಾಡಿದನು. ಇದೇ ವಯಸ್ಸಿನಲ್ಲಿ ಧ್ಯಾನ ಮಾಡುವುದನ್ನು ಪ್ರಾರಂಭಿಸಬೇಕು.

ಅನಂತರ, ಶ್ರೀ ಪತ್ರೀಜಿಯವರ ಭೋಜನ. ಹಾಗೆಯೇ 25x25 ಪಿರಮಿಡ್‌ನ ಕಾಂಪ್ಲೆಕ್ಸ್‌ಗಳು ಸಿದ್ಧವಾಗಿವೆ. ತಮ್ಮ ಸಂಸ್ಥೆಯ ಲಾಂಛನವನ್ನು ಪಿರಮಿಡ್ ಜೊತೆಗೆ ಬದಲಾಯಿಸುವ ಯೋಜನೆಯನ್ನು ತಿಳಿಸಿದರು. ಶ್ರೀ ಪತ್ರೀಜಿಯವರು ಭೋಜನದ ನಂತರ, ರಾತ್ರಿ 8 ಘಂಟೆಯ ವಿಮಾನದಲ್ಲಿ ಹೈದರಾಬಾದಿಗೆ ಬಹಳ ಸಂತೋಷದಿಂದ ಪ್ರಯಾಣ ಬೆಳಸಿದರು.

– ಶಾಲಿನಿ, ಚೆನ್ನೈ



## ಧ್ಯಾನ ಎಂದರೆ.....

''ಧ್ಯಾನವು ನಂಬಿಕೆಗಳ ಒಂದು ಸಮೂಹವಲ್ಲ, ಒಂದು ಸಿದ್ಧಾಂತವಲ್ಲ, ಒಂದು ಜೀವನಶೈಲಿಯಲ್ಲ ಅಥವಾ ಒಂದು ಧರ್ಮವೂ ಅಲ್ಲ, ಇದೊಂದು ಅನುಭವ, ವ್ಯಕ್ತಿಯೊಬ್ಬ ಪ್ರತಿನಿತ್ಯ 20 ಅಥವಾ 30 ನಿಮಿಷಗಳ ಕಾಲ ಅಭ್ಯಾಸ ಮಾಡುವ ಒಂದು ಮಾನಸಿಕ ತಂತ್ರ. ಪ್ರಜ್ಞಾ ಮನಸ್ಸಿಗೆ ತನ್ನ ಕ್ರಿಯಾಶೀಲ ಮತ್ತು ಸುಪ್ತ ಅಸ್ತಿತ್ವ ಹಾಗೂ ತನ್ನ ನಿರ್ದಿಷ್ಟ ಹಾಗೂ ಅನಂತ ಅಸ್ತಿತ್ವಗಳ ಆಳ ಅಗಲಗಳಿಗೆ ಸಂಬಂಧಿಸಿದ ಒಟ್ಟಾರೆ ವ್ಯಾಪ್ತಿಯನ್ನು ತಿಳಿದುಕೊಳ್ಳಲು ಧ್ಯಾನವು ಒಂದು ಮಾರ್ಗವನ್ನು ಒದಗಿಸುತ್ತದೆ.''

–ಶ್ರೀ ಮಹೇಶ್ ಯೋಗಿ

# ಆಹಾರ ವ್ಯವಹಾರ

'ಆಹಾರ'ವೆಂದರೆ.....ತೆಗೆದುಕೊಳ್ಳುವುದು. 'ವ್ಯವಹಾರ'ವೆಂದರೆ, ಕೊಡಲ್ಪಡುವುದು. ಮಾಮೂಲು ಮನುಷ್ಯರ ಉದ್ದೇಶದಲ್ಲಿ 'ಸ್ವೀಕರಿಸುವುದು' ಅಂದರೆ, ಶರೀರಕ್ಕೋಸ್ಕರ, ಒಳಗೆ ತೆಗೆದುಕೊಳ್ಳುವ ಆಹಾರ, 'ಕೊಡಲ್ಪಡುವುದು' ಅಂದರೆ, ಹೊರಗೆ ಮಾಡುವ ವ್ಯವಹಾರ, ಆಹಾರ ತೆಗೆದುಕೊಳ್ಳುವುದೆಂದರೆ, ಶರೀರಕ್ಕೆ ಪೋಷಣೆ ಕೊಡುವ ಆಹಾರ, ಇದು ಪ್ರತಿ ಪ್ರಾಣಿಯೂ ಮಾಡುತ್ತದೆ. ಇದರಲ್ಲಿ ಯಾವ ಪ್ರತ್ಯೇಕತೆಯೂ ಇಲ್ಲ. ಮತ್ತೆ ಮನುಷ್ಯನಾಗಿ ಹುಟ್ಟಿರುವುದಕ್ಕೆ ನಮಗೆ ಸ್ವಲ್ಪ ಪರಿಣತಿ ಇರಬೇಕಲ್ಲವೇ!. ಹೊಟ್ಟೆ ತುಂಬಿಸಿಕೊಳ್ಳುವುದು ಅಗತ್ಯವಾದ ವಿಷಯವೇ. ಆದರೆ, ಅದಕ್ಕೇ ಹೆಚ್ಚು ಗಮನ ಕೊಡಬಾರದು.

ಆಹಾರಗಳಲ್ಲಿ ನಾಲ್ಕು ವಿಧಗಳು ಇವೆ.

1. ಶರೀರಕ್ಕೆ ಅವಶ್ಯಕವೆನಿಸಿರುವ ಆಹಾರ
2. ಮನಸ್ಸಿಗೆ ಬೇಕಾಗಿರುವ ಆಹಾರ
3. ಬುದ್ಧಿವಂತಿಕೆಗೆ ಬೇಕಾದ ಆಹಾರ
4. ಆತ್ಮಕ್ಕೆ ಬೇಕಾಗಿರುವ ಆಹಾರ



ಮೊದಲನೆಯದು, ಶರೀರಕ್ಕೆ ಸಂಬಂಧಪಟ್ಟಂತೆ ಸ್ವೀಕರಿಸುವ ಆಹಾರ - ಯಾರೂ ತಿಳಿಸದಿದ್ದರೂ, ಎಲ್ಲರೂ ಮಾಡುತ್ತಿರುವುದೇ ಅದು. "ಮಾನಸಿಕವಾಗಿ ಬೇಕಾಗಿರುವ ಆಹಾರ ಸ್ವೀಕರಿಸುವುದು" ಅಂದರೆ, ಸೂರ್ಯೋದಯ, ಸೂರ್ಯಾಸ್ತ ಸಮಯ, ತುಂಬಿದ ಬೆಳದಿಂಗಳು, ಪ್ರಕೃತಿ ಅಂದ-ಚಂದಗಳು ಇವುಗಳೆಲ್ಲಾ ಮನಸ್ಸಿಗೆ ಅತ್ಯಂತ ಆಹ್ಲಾದವನ್ನು ಮತ್ತು ಆನಂದವನ್ನು ಕೊಡುತ್ತದೆ, ಮನಸ್ಸು ಹಬ್ಬವನ್ನು ಮಾಡಿಕೊಳ್ಳುತ್ತದೆ. ಆದರೆ ಅವುಗಳಲ್ಲೇ ಮನಸ್ಸು ಮಗ್ನವಾಗಿರುವಾಗ ಅದರ ಆರೋಗ್ಯ ದ್ವಿಗುಣವಾಗುತ್ತದೆ.

"ಬುದ್ಧಿಗೋಸ್ಕರ ಆಹಾರವನ್ನು ಸ್ವೀಕರಿಸುವುದು" - ಅಂದರೆ, ಬುದ್ಧಿಯು ಪರಿಶುದ್ಧವಾಗಬೇಕಾದರೆ, ನಿಜವಾದ ಆಧ್ಯಾತ್ಮಿಕ ಗ್ರಂಥಗಳನ್ನು ಓದಬೇಕು. ಈಗ ಆರೋಗ್ಯವಾಗಿರುವವರ ಬುದ್ಧಿ ಭಗವದ್ಗೀತೆ, ಬೈಬಲ್, ನ್ಯೂ-ಏಜ್ ಸ್ಪಿರಿಚುವಲ್ ಬುಕ್‌ಗಳನ್ನು ಓದಬೇಕೆಂದು ಬಹಳ ಆಸೆಯಾಗುತ್ತಿರುತ್ತದೆ. ಒಳ್ಳೆಯ ಪುಸ್ತಕಗಳನ್ನು ಪದೇ ಪದೇ ಓದುವುದರಿಂದ ಮಹಾತ್ಮರ ಒಳ್ಳೆಯತನಗಳನ್ನು ನಮ್ಮಲ್ಲಿ ತುಂಬಿಕೊಳ್ಳುತ್ತೇವೆ.

ಎಲ್ಲವುಗಳಲ್ಲಿ ಅತ್ಯುನ್ನತವಾದುದು "ಆತ್ಮಪರವಾದ ಆಹಾರ ಸ್ವೀಕಾರ" ಮಾಡುವುದು. ಅದೇ 'ಧ್ಯಾನ'! ಧ್ಯಾನದಿಂದ ನಮ್ಮ ಪ್ರಾಣಶಕ್ತಿಯನ್ನು, ವಿಶ್ವಜ್ಞಾನವನ್ನು, ವಿಜ್ಞಾನ ಸಂಪತ್ತನ್ನು ವಿಶೇಷವಾಗಿ ಹೊಂದುವುದೇ ಆತ್ಮಕ್ಕೆ ಬೇಕಾದ ಆಹಾರ ಸ್ವೀಕಾರ. ಆದ್ದರಿಂದಲೇ, ನಮ್ಮ "P.S.S.M" ರವರಾದ ನಾವೆಲ್ಲಾ ಈ ಧ್ಯಾನ, ಸ್ವಾಧ್ಯಾಯ, ಸಜ್ಜನ-ಸಾಂಗತ್ಯಗಳಿಂದ ನಾಲ್ಕು ತರಹದ ಆಹಾರಗಳನ್ನು ಹೊಂದುತ್ತಾ ದಿನದಿಂದ ದಿನಕ್ಕೆ ಮಹಾಶಕ್ತಿವಂತರಾಗುತ್ತಿದ್ದೇವೆ. ನಾವೇ ಅಲ್ಲದೇ ಪ್ರಪಂಚವನ್ನೆಲ್ಲಾ ನಮ್ಮಂತೆಯೇ ತಯಾರು ಮಾಡಬೇಕೆನ್ನುವುದೇ ನಮ್ಮ ಮೌಲ್ಯಯುತವಾದ ಸಿದ್ಧಾಂತ.

ಈ ಪರಿಪೂರ್ಣವಾದ 'ಚತುರ್ವಿಧ ಆಹಾರ ಸ್ವೀಕರಿಸುವ' ಸಮಗ್ರ ವಿಧಾನದಿಂದ ನಮ್ಮ 'ಜೀವನ' ಪರಮ ಅದ್ಭುತವಾಗಿ ತಯಾರಾಗುತ್ತದೆ. ನಮ್ಮ ಬಾಯಿಂದ ಬರುವ "ವ್ಯವಹಾರ" ಸದಾ ನಮ್ಮ ಮೈಂಡ್‌ನಲ್ಲಿ ಇರುವ ಆಹಾರದ ಮೇಲೆ ನೂರಕ್ಕೆ ಸಾವಿರ ಪಾಲು ಆಧಾರಪಟ್ಟಿರುತ್ತದೆ. ಮಾನಸಿಕ ಪರವಾದ, ಬುದ್ಧಿಪರವಾದ, ಆತ್ಮಪರವಾದ, ಆಹಾರಗಳು ತೆಗೆದುಕೊಂಡಾಗ, ಮೈಂಡ್ ನಮಗೆ ತಿಳಿಯದಂತೆಯೇ, ನಮ್ಮ ವಶವಾಗಿರುತ್ತದೆ. ಆದರಿಂದ, ಇದ್ದಕ್ಕಿದ್ದಂತೆಯೇ ಮಾತು ಸರಿಯಾಗಿ ಬರುತ್ತದೆ. ಮಾತು ಸರಿಯಾಗಿರುವಾಗಲೇ, ತನ್ನಷ್ಟಕ್ಕೇ ತಾನೇ ಸರಿಯಾಗಿ ಬದಲಾಗಿಹೋಗುತ್ತದೆ. ಆದ್ದರಿಂದ "ವ್ಯವಹಾರ"ದಲ್ಲೇ ಅಲ್ಲದೆ, ಆಹಾರದಲ್ಲೂ ಜಾಗ್ರತೆಯಿಂದ ಇರಬೇಕು. ಬೆಳಗ್ಗೆ ಎದ್ದ ಕೂಡಲೇ ಎರಡು ಘಂಟೆಗಳು ಧ್ಯಾನ ಮಾಡುವುದರಿಂದ, ಆತ್ಮಕ್ಕೆ ಆಹಾರ ಕೊಟ್ಟು ಹೊರಗೆ ಹೋಗಿ ವ್ಯವಹಾರವನ್ನು ಮಾಡಿ ನೋಡಿದರೆ, ಮುಖದ ವರ್ಚಸ್ಸು ಬಹಳಷ್ಟು ಹೆಚ್ಚಿ ಪ್ರತಿ ಕೆಲಸವೂ ಯಶಸ್ವಿಯಾಗಿರುತ್ತದೆ.

ಮನುಷ್ಯನು ಮುಖ್ಯ - ಆತನ 'ನೆರಳು' ಮುಖ್ಯವಲ್ಲ! "ನನ್ನ ನೆರಳು ನನ್ನ ಹಿಂದೆ ಬರುತ್ತದೆಯೋ, ಇಲ್ಲವೋ" ಎಂದು ಭಯಪಡಬೇಕಾಗಿಲ್ಲ! ಏಕೆಂದರೆ, ನೆರಳು ಯಾವಾಗಲೂ ಬಿಡುವುದಿಲ್ಲ "ನೆರಳು ಕುರಿತು ಆ ತರಹ ಅನುಮಾನ ಪಡಬೇಕಾಗಿಲ್ಲ, ನಮ್ಮ ಆಹಾರಕ್ಕೆ.... ವ್ಯವಹಾರವೆನ್ನುವುದು 'ನೆರಳು' ಮಾತ್ರವೇ! "ಯಥಾರಾಜ ತಥಾಪ್ರಜಾ" ಎನ್ನುವ ಹಾಗೆ, 'ಯಥಾ ಆಹಾರ ತಥಾ ವ್ಯವಹಾರ' ರಾಜನ ಕೈಯಲ್ಲಿ ಪ್ರಜೆಗಳು ಇರುತ್ತಾರೆ. ಆಹಾರವೆಂದರೆ, ರಾಜ. ವ್ಯವಹಾರವೆಂದರೆ, ಪ್ರಜೆಗಳು. ರಾಜನು ಚೆನ್ನಾಗಿದ್ದರೆ, ಪ್ರಜೆಗಳು ಸಹಜವಾಗಿ ಚೆನ್ನಾಗಿರುತ್ತಾರೆ.



ನಾವು ನಾಸ್ತಿಕರಾದರೆ, ಅದಕ್ಕೆ ಸಂಬಂಧಪಟ್ಟಂತಹ ಗ್ರಂಥಗಳನ್ನು ಹೆಚ್ಚಾಗಿ ಓದಿದರೆ, ಆ ಭಾವನೆಗಳೇ ಬೆಳೆದು ಹೇಗೆ ನಾಸ್ತಿಕರಾಗುತ್ತಿದ್ದೇವೇಯೋ, ಹಾಗೇ, ಬುದ್ಧ ಮಹಾವೀರರ ಪುಸ್ತಕಗಳನ್ನು ಓದಿದರೆ, ಬುದ್ಧಿಯು ವಿಕಸಿತಗೊಂಡು, ಅವರಂತೆ ನಾವೂ ಆಗುತ್ತೇವೆ. ನಾಸ್ತಿಕರದು, ಬಾವಿಯಲ್ಲಿ ಬದುಕುವ ಕಪ್ಪೆಗಳಂತೆ ಮಾಮೂಲೂ ಜೀವನ. ಧ್ಯಾನಿಗಳದು, ವಿಶಾಲವಾದ ಸಮುದ್ರದಲ್ಲಿ ಬದುಕುವ ತಿಮಿಂಗಲದಂತಹ ಜೀವನ.

ಪ್ರತಿಯೊಬ್ಬ ವ್ಯಕ್ತಿಯು ಸಕಲ ಪ್ರಾಣಿ ಕೋಟಿಯಿಂದ ಎಲ್ಲವನ್ನೂ ಕಲಿತುಕೊಳ್ಳಬೇಕು - "ನಿರಂತರವೂ ಕಲಿತುಕೊಳ್ಳಬೇಕು" ಎಂಬುದು ಇರಬೇಕು. ಕಲಿತುಕೊಳ್ಳಬೇಕೆಂಬ ಆಸೆ, ಗಮನಿಸುವುದು, ಇರಬೇಕೇ ಹೊರತು, ಒಂದು ಇರುವೆ, ಒಂದು ಹಾವು, ಒಂದು ಆನೆ, ಒಬ್ಬ ಜವಾನ ಎಲ್ಲರ ಹತ್ತಿರವೂ - ಎಲ್ಲರಿಂದಲೂ ಕಲಿತುಕೊಳ್ಳಬೇಕೆಂಬುದು ಧೃಢ ನಿಶ್ಚಯವಾಗಿರುತ್ತದೆ. ಕತ್ತಿ-ಯುದ್ಧ ಕಲಿಯಬೇಕೆಂಬ ಅಪೇಕ್ಷೆ ಇರುವವರು ಯಾವಾಗಲೂ ತಮ್ಮ ಕತ್ತಿಯನ್ನು ತುಕ್ಕುಹಿಡಿಯಲು ಬಿಡುವುದಿಲ್ಲ! ಆಗಾಗ ಅದಕ್ಕೆ ಸಾಣೆ ಮಾಡುತ್ತಾ...... ಇನ್ನೂ ಇನ್ನೂ ಹೊಳೆಯುವಂತೆ ಮಾಡುತ್ತಾ, ಅಭ್ಯಾಸ ಮಾಡುತ್ತಲೇ ಇರುತ್ತಾರೆ. ಆದ್ದರಿಂದಲೇ, ನಿಜವಾಗಿ ಯುದ್ಧ ಮಾಡಬೇಕಾಗಿ ಬಂದಾಗ ಜಯವನ್ನು ಹೊಂದುತ್ತಾನೆ. ಒಂದು ಕಾರ್ಯಾಗಾರದಲ್ಲಿ ಒಬ್ಬ ಪರಿಶ್ರಮಿಯು ತಾನು ಸಂಪಾದಿಸಿದ ನಾಣ್ಯವನ್ನು ಆಗಿಂದಾಗ್ಗೆ ಪರೀಕ್ಷಿಸಿಕೊಳ್ಳುತ್ತಲೇ ಇರುತ್ತಾನೆ.

ಸಾಧನೆಯ ತೀವ್ರತೆಯನ್ನು ಪಡೆದು ಸಾಧನೆಯನ್ನು ಶ್ರದ್ಧೆಯಿಂದ ಹಿಡಿದು ಸಾಧ್ಯ ಅಸಾಧ್ಯ, ಅನುಕೂಲ ಆಗುತ್ತಲೇ ಇರುತ್ತವೆ. ಕೆಲವರಿಗೆ ಧ್ಯಾನ ಮಾಡಲು ಪ್ರಾರಂಭಮಾಡಿದ ಮೂರನೇ ದಿವಸಕ್ಕೆ ಮೂರನೇ ಕಣ್ಣು ತೆರೆದುಕೊಳ್ಳುತ್ತದೆ. "ಅದೃಷ್ಟ" ಎಂದುಕೊಳ್ಳುತ್ತಾರೆ ಅಜ್ಞಾನಿಗಳು. ಆದರೆ, ಯಾವುದೂ ತಾನಾಗಿಯೇ ಬರುವುದಿಲ್ಲ ಇದಕ್ಕೆ ಹಿಂದಿನ ಜನ್ಮದಲ್ಲಿ ಅಖಂಡವಾಗಿ ಮಾಡಿದ ಇದೇ ಧ್ಯಾನ ಸಾಧನೆಯ ಫಲ! ಹಿರಣ್ಯಕಶಿಪು, ಪ್ರಹ್ಲಾದನನ್ನು ಸಾಯಿಸುವುದಕ್ಕೆ ಶತ-ವಿಧಾನದಿಂದ ಪ್ರಯತ್ನ ಮಾಡಿದನು. ಪ್ರಹ್ಲಾದನಾಗಿ ಹುಟ್ಟಿದ ಆ ಬಾಲಕನು, ಆ ಪ್ರಹ್ಲಾದ ಜನ್ಮದಲ್ಲಿ ಯಾವ ಸಾಧನೆಯನ್ನೂ ಮಾಡಲಿಲ್ಲ, ಅಂದರೆ, ಏನು? ಅದಕ್ಕೆ ಹಿಂದಿನ ಜನ್ಮದಲ್ಲಿಯೇ ಪಡೆದುಕೊಂಡಿದ್ದ "ಧ್ಯಾನ ಮಹಿಮೆ"ಯು ಬ್ರಹ್ಮಾಂಡವಾಗಿ ವಿಕಸಿತಗೊಂಡಿತ್ತು. ಅದರಿಂದಲೇ, ಹಿರಣ್ಯಕಶಿಪುವಿಗೆ ಏನು ಮಾಡಲು ಸಾಧ್ಯವಾಗಲಿಲ್ಲ. ಅದೂ ಅಲ್ಲದೆ, ಡಾಕ್ಟರ್ ಮಂಗಳಂ ಪಲ್ಲಿ ಬಾಲಮುರಳಿ ಕೃಷ್ಣರವರು ಅತೀ ಚಿಕ್ಕವಯಸ್ಸಿನಲ್ಲಿಯೇ ಸಂಗೀತವನ್ನು ಆರಾಧಿಸಿದರು, ಆಸ್ವಾದ ನೀಡಿದರು. ಯಾರೂ ವಿಶಿಷ್ಟವಾದ ರೀತಿಯಲ್ಲಿ ಕಲಿಸಲಿಲ್ಲ, ಎಲ್ಲಿಂದ ಬಂದಿದೆ ಆ ಮಹಿಮೆ? ಎಲ್ಲಾ ಸಹ ಪೂರ್ವಜನ್ಮದಲ್ಲಿ ಕಲಿತು ಕೊಂಡು ಬಂದಿದ್ದರು. ಆದ್ದರಿಂದ, ಈ ಜನ್ಮದಲ್ಲೂ ಬಂದಿದೆ!

ಪೂರ್ವಜನ್ಮದಲ್ಲೂ ಮತ್ತೆ ಈ ಜನ್ಮದಲ್ಲೂ ಸಾಧನೆಯಿಲ್ಲದವರ ವಿಷಯ ಏನು? ಅವರಿಗೋಸ್ಕರವೇ ನಮ್ಮ "P.S.S.M" ಸ್ಥಾಪಿಸಲ್ಪಟ್ಟಿದೆ. ನಮ್ಮ ಕೈಗೆ ಐದು ಬೆರಳುಗಳಿವೆ. ಚಿಕ್ಕಬೆರಳು ಶರೀರದ ಆರೋಗ್ಯಕ್ಕೋಸ್ಕರ, ಉಂಗುರದ ಬೆರಳು ಮಾನಸಿಕ ಆರೋಗ್ಯ, ಮಧ್ಯದ ಬೆರಳು ಬುದ್ಧಿವಂತಿಕೆಯ ಆರೋಗ್ಯಕ್ಕೋಸ್ಕರ, ನಾಲ್ಕನೆಯ ಬೆರಳು ಸಂಘಪರವಾದ ಆರೋಗ್ಯಕ್ಕೆ ಇರುತ್ತದೆ. "ನಾನು ಚೆನ್ನಾಗಿರಬೇಕು" ಎನ್ನುವುದು ಆತ್ಮಕ್ಕೆ ಸಂಬಂಧಪಟ್ಟಂತ ಆರೋಗ್ಯ- "ಎಲ್ಲರೂ ಚೆನ್ನಾಗಿರಬೇಕು" ಎಂದುಕೊಳ್ಳುವುದು ಸಂಘಕ್ಕೆ ಸಂಬಂಧಪಟ್ಟಂತ ಆರೋಗ್ಯ. "ಸೂಕ್ಷ್ಮದಲ್ಲಿ ಬೆಟ್ಟದಷ್ಟು ಮೋಕ್ಷ" ಧ್ಯಾನಿಗಳಿಗೆ ಸಿದ್ಧಿಸಿದರೆ, "ಸ್ಥೂಲದಲ್ಲಿ ಸ್ವಲ್ಪದರಲ್ಲಿ ಮೋಕ್ಷ" ಪುಣ್ಯಕಾರ್ಯಗಳು ಮಾಡುವವರಿಗೆ ಲಭಿಸುತ್ತದೆ! ಬೆಟ್ಟದಷ್ಟು ಪುಣ್ಯಕಾರ್ಯಗಳನ್ನು ಮಾಡಿದರೆ, ಬರುವ ಮೋಕ್ಷವು- ದಿವಸಕ್ಕೆ ಎರಡು ಘಂಟೆಗಳ ಕಾಲ ಧ್ಯಾನಮಾಡಿದರೆ ಬಂದುಬಿಡುತ್ತದೆ.

ಒಬ್ಬನ ಜೀವನ "ಮೂರು ಹೂವುಗಳು ಆರು ಕಾಯಿಗಳಾಗಿ ಇದೆ" ಎನ್ನುತ್ತೇವೆ. ಆದರೆ, ಧ್ಯಾನ ಮಾಡುವವರಿಗೆ "ಮೂವತ್ತು ಹೂಗಳು ಅರವತ್ತು ಕಾಯಿಗಳಂತೆ" ಜೀವನವಿರುತ್ತದೆ! ಅಂದರೆ, ಧ್ಯಾನಿಯಾಗದೇ ಇರುವವರಿಗೆ ದಕ್ಕುವುದು - ಮೂರು ಭಾಗ್ಯಗಳು.....ಹೆಚ್ಚು ಅಂದರೆ, ಆರು ಭಾಗ್ಯಗಳು....... ಅದು ಎಷ್ಟೋ, ನೂರಾರು, ಸಾವಿರಾರು ಪುಣ್ಯಕಾರ್ಯಗಳನ್ನು ಮಾಡಿದರೆ ಮಾತ್ರ.. ಆದರೆ, ಧ್ಯಾನಿಗಳಾಗಿರುವವರಿಗೆ "ಮೂವತ್ತು, ಅರವತ್ತು" ಅಬ್ಬಾ ಕೊನೆಯೇ ಇಲ್ಲದಷ್ಟು ಭಾಗ್ಯಗಳು!

ಶರೀರಕ್ಕೆ ನೀರು ಹಾಕಿಕೊಂಡರೆ, ಅದು ಸ್ನಾನ. ಆತ್ಮಕ್ಕೆ ಪ್ರಾಣವನ್ನು ಹಾಕಿಕೊಂಡರೆ, ಅದು ಧ್ಯಾನ! ಆದುದರಿಂದಲೇ, ಕೇವಲ "ಶರೀರಕ್ಕೆ ಆಹಾರ" ಎಂದುಕೊಳ್ಳದೇ, ಪ್ರತಿ ವ್ಯಕ್ತಿಯು ಪ್ರತಿದಿವಸ, ಧ್ಯಾನ ತಪ್ಪದೇ ಆಚರಿಸಿದರೆ, ಈ ಜನ್ಮದಲ್ಲಾದರೂ ಶಾರೀರಿಕ ಪರ, ಮಾನಸಿಕಪರ, ಬುದ್ಧಿಪರ, ಆತ್ಮಪರ, ಸಂಘಪರವಾದ ಆರೋಗ್ಯವನ್ನು ಹೊಂದುತ್ತಾರೆ.

- ಕನ್ನಡಕ್ಕೆ : ತುಳಸಿ ಕೆ. ಮೂರ್ತಿ




# Global Congress for Spiritual Scientists 2009

## Earth Evolution Through Spiritual Revolution

The Global Congress of Spiritual Scientists (GCSS) is a unique Platform created for New Age Spiritual Masters and Spiritual Scientists of the world to share their Wisdom, Perspectives, and Experiences with Spiritual Seekers and Leading-edge Thinkers across the globe.

This 4-day residential conference will be held from October 2-5, in the picturesque Pyramid Valley, near Bangalore. Energized by the mystical powers of the World's Largest Pyramid built solely for meditation, and blessed with natural meditative environs, Pyramid Valley (www.pyramidvalley.org) provides a unique space for learning and self-development.

This Event is jointly organized by The Pyramid Spiritual Trust (India) and Life Research Academy in association with Times Foundation.

The Theme of the Congress is " **EARTH EVOLUTION THROUGH SPIRITUAL REVOLUTION** ". In line with the theme, several globally renowned spiritual masters will share the secrets of their own spiritual transformation and inspire us with their vision for a better world - a world where Spirituality will no longer be viewed as "Away from Life" but as "A Way of Life".

The Event will comprise of workshops, seminars, lectures, research paper presentations, meditation sessions, and exhibitions. All sessions would be interactive and allow sharing Speakers at the Conference are at the pinnacle of their respective fields, and bring with them their lifetimes' wisdom. The speakers include:

- From India... **Brahmarshi Patriji** on The Science of Meditation and **Dr. Newton K.** on The Science of Future Life Progression & Past Life Regression . **Sri Sri Ravi Shankar** will present keynote address.
- From U.S.A... **Bob Frissell** on Countdown to 2012 and Beyond, **Rasha** on Oneness: Discovering the Divinity Within, and **Eric Burglund** on Preparing for the Coming Changes
- From Australia... **Jasmuheen** on Enhancing Human Evolution and the Global benefits of Personal Enlightenment

Special from Damanhur Spiritual Community, Italy... **Esperide Ananas** will take us through an amazing demonstration of Plant Consciousness - a skill that was perfected at Damanhur through technological research

Several Leading-edge Thinkers from all walks of life will participate to witness the research in the field of spiritual science and have an opportunity to apply the wisdom in their respective fields for personal as well as social development, while spiritual seekers will be able to learn and practice ways that lead to Spiritual Growth.

Benefits to participants include understanding and preparing for the changes leading to 2012 and beyond, getting glimpses into the future & discovering the purpose of this life, increasing pranic energy, learning about and experiencing the amazing healing power of music, witnessing plant consciousness, practicing intensive meditation and many more.

For enquiries and registrations, visit www.spiritualcongress.org or call 080 4343 2525.

# ಹಿಮಾಲಯ ಧ್ಯಾನ ಯಾತ್ರೆ

**ಆಗಸ್ಟ್ 1ನೇ ದಿನ :** ಎಲ್ಲರೂ ದೆಹಲಿ ಸೇರಿದೆವು ಆ ದಿನ ಗೀತಾ ಭವನದಲ್ಲಿ ಉಳಿದುಕೊಂಡೆವು. ಈ ಯಾತ್ರೆಗೆ ಸುಮಾರು 276 ಜನ ಹಾಜರಾಗಿದ್ದರು.

**ಆಗಸ್ಟ್ 2ನೇ ದಿನ :** ಬೆಳಿಗ್ಗೆ ಇನ್‌ದೇರ್‌ಪುರಿಯಲ್ಲಿರುವ "ಶ್ರೀ ಗೌತಮ ಬುದ್ಧ ಪಿರಮಿಡ್ Spiritual ಕೇರ್ ಸೆಂಟರ್"ಗೆ ಹೋದೆವು. ಕೇರ್ ಸೆಂಟರ್‌ನಲ್ಲಿ ಗ್ರಂಥಾಲಯವಿದೆ. ದೊಡ್ಡ ದೊಡ್ಡ ಪಿರಮಿಡ್‌ಗಳಿವೆ. ಧ್ಯಾನಿಗಳೆಲ್ಲ ಅಲ್ಲಿಗೆ ಹೋಗಿ ಧ್ಯಾನ ಮಾಡಿ ಬಂದರು. ನಂತರ, ಇಂಡಿಯ ಗೇಟ್, ರೆಡ್ ಫೋರ್ಟ್, ಬಿರ್ಲಾ ಮಂದಿರ, ಕುತುಬ್ ಮೀನಾರ್, ಇಂದಿರಾಗಾಂಧಿ ಮೆಮೋರಿಯಲ್, ಮಹಾತ್ಮಾಗಾಂಧಿ ಮ್ಯೂಜಿಯಂ, ಲೋಟಸ್ ಟೆಂಪಲ್, ಅಕ್ಷರಧಾಮ, ಇವನ್ನೆಲ್ಲಾ ವೀಕ್ಷಿಸಿ ನಾವು ಗೀತಾ ಭವನಕ್ಕೆ ತೆರಳಿದೆವು. ಅದೇ ದಿನ ರಾತ್ರಿ ಭೋಜನಾ ನಂತರ ಎಲ್ಲರೂ ಬಸ್ ಹತ್ತಿ ಋಷಿಕೇಶ ಕಡೆಗೆ ಹೊರಟೆವು.

**ಆಗಸ್ಟ್ 3ನೇ ದಿನ :** ಬೆಳಿಗ್ಗೆ ಋಷಿಕೇಶದಲ್ಲಿರುವ ದಯಾನಂದ ಆಶ್ರಮಕ್ಕೆ ಹೊರಟೆವು. ಆಶ್ರಮದ ಪಕ್ಕದಲ್ಲಿ ಗಂಗಾ ನದಿಯು ಅಲೆ ಅಲೆಯಾಗಿ ಹರಿಯುತ್ತಿದ್ದಳು. ಎಲ್ಲರೂ ಗಂಗಾ ನದಿಯಲ್ಲಿ ಸ್ನಾನ ಮಾಡಿದೆವು. ಅಲ್ಲಿ ರಾಮಜೂಲ, ಲಕ್ಷ್ಮಣ ಜೂಲ ನೋಡಿ ಮತ್ತೆ ಆಶ್ರಮಕ್ಕೆ ಹೊರಟೆವು. ಆ ವೇಳೆಗೆ ಪತ್ರಿಜೀಸರ್ ಅಲ್ಲಿಗೆ ಆಗಮಿಸಿದರು. ಅವರು ಬಂದ ಒಡನೆ ಎಲ್ಲರಲ್ಲೂ ಹೊಸ ಉತ್ಸಾಹ ಹೊರ ಹೊಮ್ಮಿತ್ತು. ನಂತರ, ಎಲ್ಲರೂ 2 ಗಂಟೆಗೆ ಹರಿದ್ವಾರಕ್ಕೆ ಹೊರಟೆವು. ರೋಪ್‌ವೇ ಮುಖಾಂತರ ಹೋಗಿ ಚಂಡಿದೇವಿ, ಮಾನಸಾದೇವಿ ದೇವಾಲಯಗಳನ್ನು ನೋಡಿಕೊಂಡು, ಅಂದು ಸಂಜೆ 7 ಘಂಟೆಗೆ ಗಂಗಾ ಆರತಿ ನೋಡಿ ಮತ್ತೆ ನಾವು ಋಷಿಕೇಶಕ್ಕೆ ಹೊರಟೆವು. ಪತ್ರಿಜೀ ಸರ್ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರದ ಬಗ್ಗೆ ಎಲ್ಲರಿಗೂ ಅರ್ಥವಾಗುವಂತೆ ಚೆನ್ನಾಗಿ ತಿಳಿಸಿಕೊಟ್ಟರು.

ಮನಸ್ಸು, ಬುದ್ಧಿ, ಚಿತ್ತ ಅಹಂಕಾರ. ಇದರಲ್ಲಿ ಇಬ್ಬರು ಹೀರೋ ಇಬ್ಬರು ವಿಲ್ಲನ್ ಇದ್ದಾರೆ.

ಮನಸ್ಸು - ಬುದ್ಧಿ ಅನ್ನೋದು ಹೀರೋ. ಚಿತ್ತ-ಅಹಂಕಾರ ಅನ್ನೋದು ವಿಲನ್. 'ಅಹಂಕಾರ' ಎನ್ನುವುದು ಕೇವಲ ನೆರಳು. ನಿಜವಾದ 'ವಿಲನ್' ಎಂದರೆ ಚಿತ್ತ.

ಚಿತ್ತ ಎನ್ನುವ ವಿಲನ್‌ನನ್ನು ತೆಗೆದುಹಾಕಿದರೆ ಅಹಂಕಾರವೆಂಬ ನೆರಳು ಸಹ ದೂರವಾಗುತ್ತದೆ ಎಂದ ಪತ್ರಿಜೀಸರ್ ತುಂಬ ಚೆನ್ನಾಗಿ ವಿವರಿಸಿದರು.

**ಆಗಸ್ಟ್ 4ನೇ ದಿನ :** ಬೆಳಿಗ್ಗೆ ಪಿಪ್ಪಲಕೋಟೆಗೆ ಹೊರಟೆವು. ಅದು ತುಂಬಾ ಘಾಟ್ (ತಿರುವಿನಿಂದ ಕೂಡಿರುವ) ರಸ್ತೆಯಾಗಿತ್ತು. ದೊಡ್ಡ ದೊಡ್ಡ ಬೆಟ್ಟಗಳು, ಹಚ್ಚ ಹಸಿರಾದ ಪ್ರಕೃತಿ ನಮ್ಮನ್ನು ಬೇರೇ



ಪ್ರಪಂಚಕ್ಕೆ ಕೊಂಡೊಯ್ದಿತ್ತು. ಬೆಟ್ಟಗಳನ್ನು ಎಷ್ಟು ನೋಡಿದರು ಆಸೆ ತೀರುತ್ತಿರಲಿಲ್ಲ. ಒಂದು ಬೆಟ್ಟಕ್ಕಿಂತ ಇನ್ನೊಂದು ಬೆಟ್ಟ ಬಹಳ ಸುಂದರವಾಗಿತ್ತು. ಹೀಗೆ ಪ್ರತಿ ಬೆಟ್ಟ, ಪ್ರತಿ ಮರಗಳನ್ನು ನೋಡುತ್ತಾ ಸಂಜೆಗೆ ಪಿಪ್ಪಲಕೋಟೆ ಸೇರಿದೆವು. ರಾತ್ರಿಗೆ ನಾವು ಅಲ್ಲೇ ಉಳಿದುಕೊಂಡೆವು.

**ಆಗಸ್ಟ್ 5ನೇ ದಿನ :** ಬೆಳಿಗ್ಗೆ 5 ಗಂಟೆಗೆ ನಮ್ಮೆಲ್ಲರ ಪ್ರಯಾಣ ಬದರೀನಾಥ್ ಕಡೆಗೆ ಹೊರಟಿತು. ಬೆಳಗಿನ ಜಾವದ ಮಂಜು ಆವರಿಸಿದ ಬೆಟ್ಟಗಳನ್ನು ನೋಡುತ್ತಾ ಆಗ ತಾನೇ ಸೂರ್ಯನ ಕಿರಣಗಳು ಮಂಜಿನ ಮೇಲೆ ಬಿದ್ದ ಅದರ ಪ್ರಕಾಶದ ಕಾಂತಿಯನ್ನು ನೋಡಲು ಎರಡು ಕಣ್ಣು ಸಾಲದು. ಅಲ್ಲಲ್ಲಿ ಜಲಪಾತಗಳು ಕಾಣುತ್ತಿತ್ತು. ಹೀಗೆ ಎಲ್ಲಾ ಸುಂದರ ದೃಶ್ಯಗಳನ್ನು ನೋಡಿಕೊಂಡು ಬದರೀನಾಥ್ ಸೇರಿದೆವು. ಬಸ್ಸು ಇಳಿಯುತ್ತಿದ್ದ ಹಾಗೆಯೇ, ಸಾಕ್ಷಾತ್ ಬದರೀನಾರಾಯಣರಾದ ಪತ್ರೀಜಿಸರ್ ಪ್ರತ್ಯಕ್ಷವಾದರು. ಎಲ್ಲರೂ ಅವರೊಡನೆ ಫೋಟೋ ತೆಗೆಸಿಕೊಳ್ಳಲು ಮುಂದಾದರು. ಆ ಸ್ಥಳ ತುಂಬಾ ಚೆನ್ನಾಗಿದೆ. ಬದರೀನಾಥ್ 13,500 ಅಡಿ ಎತ್ತರದಲ್ಲಿದೆ. ಎಲ್ಲರೂ ಚಿನ್ನ ಜೀಯರ್ ಸ್ವಾಮಿ ಮಠಕ್ಕೆ ಹೋಗಿ, ಅಲ್ಲಿಂದ ಬದರೀನಾರಾಯಣ ದೇವಸ್ಥಾನಕ್ಕೆ ಹೋಗಿ, ಅಲ್ಲಿ ಬಿಸಿನೀರಿನ ಹೊಂಡದಲ್ಲಿ ಸ್ನಾನ ಮಾಡಿದೆವು. ಇದರ ಪ್ರಾಮುಖ್ಯತೆ ಏನೆಂದರೆ, ಈ ನೀರು ಬೆಟ್ಟಗುಡ್ಡಗಳಿಂದ ನೇರವಾಗಿ ಬರುತ್ತದೆ. ಪತ್ರೀಜಿಸರ್ ಆ ಬಿಸಿ ನೀರಿನಲ್ಲಿ ಇಳಿದು ಪೂರ್ತಿಯಾಗಿ ಧ್ಯಾನಾವಸ್ಥೆಗೆ ಹೋದರು. ಆ ದೃಶ್ಯ ನಮ್ಮನ್ನು ಯಾವುದೋ ತಿಳಿಯದ ಆಳಕ್ಕೆ ಕರೆದೊಯ್ಯಿತು. ಸ್ನಾನದ ನಂತರ, ದೇವಸ್ಥಾನಕ್ಕೆ ಹೋಗಿ ಬದರೀನಾರಾಯಣ ದರ್ಶನ ಮಾಡಿ ಎಲ್ಲರೂ ಅರ್ಧ ಗಂಟೆ ಧ್ಯಾನ ಮಾಡಿದೆವು. ಆ ಪ್ರದೇಶ ಅಷ್ಟು ಎತ್ತರವಿರುವ ಕಾರಣ ತುಂಬಾ ಚಳಿಯಿಂದ ಕೂಡಿತ್ತು. ಭೋಜನ ದ ನಂತರ ಎಲ್ಲರೂ ವ್ಯಾಸ ಗುಹೆಗೆ ಟ್ರೆಕ್ಕಿಂಗ್ ಹೋದೆವು. ನಂತರ, ಸಂಜೆ ಆ ಮಠದಲ್ಲಿ ಪತ್ರಿಜೀ ಸರ್ ಭಕ್ತಿಯ ಬಗ್ಗೆ ಪ್ರವಚನ ಧ್ಯಾನ ಕಾರ್ಯಕ್ರಮ ಮಾಡಿದರು.

**ಆಗಸ್ಟ್ 6ನೇ ದಿನ :** ಬೆಳಿಗ್ಗೆ ಬದರೀನಾಥ್‌ನಿಂದ ಹೊರಟು

ಗೋವಿಂದ ಘಾಟ್ ಸೇರಿದೆವು. ಅಲ್ಲಿಂದ 14 ಕಿ.ಮೀ. ಗಂಗಾರಿಯಾಗೆ ಪ್ರಯಾಣ, ನಡೆದುಹೋಗಬಹುದು. ಕುದುರೆಯಲ್ಲಿ, ಡೋಲಿಯಲ್ಲಿ ಹೋಗಬಹುದು. ಪತ್ರೀಜಿಸರ್ 14 ಕಿ.ಮೀ. ಗಂಗಾರಿಯಾಗೆ ನಡೆದುಕೊಂಡೇ ಹೋದರು. ನಿಧಾನವಾಗಿ ಒಬ್ಬೊಬ್ಬರೇ ಅವರವರಿಗೆ ಬೇಕಾದ ರೀತಿಯಲ್ಲಿ ಪ್ರಯಾಣ ಮುಂದುವರಿಸಿದ್ದರು. ಸುತ್ತಲು ದಟ್ಟವಾದ ಮರಗಳು, ಪಕ್ಷಿಗಳ ಚಿಲಿಪಿಲಿ ನಾದಗಳು, ದೊಡ್ಡ ದೊಡ್ಡ ಜಲಪಾತಗಳು, ಪ್ರತಿಯೊಬ್ಬರನ್ನು ಆಕರ್ಷಿಸಿತ್ತು. ಆ ದಟ್ಟವಾದ ಮರಗಳ ಮಧ್ಯೆ ನಡೆಯುತ್ತಿದ್ದರೆ, ಒಂದು ರೀತಿಯಾದ ಶಕ್ತಿಯ ಜೊತೆ ನಡೆಯುತ್ತಿದ್ದಂತ್ತಿತ್ತು. ಅಂತಹ ಅದ್ಭುತವಾದ ಪ್ರಕೃತಿಯಲ್ಲಿ ಇದ್ದಾಗ, ಯಾವುದೇ ರೀತಿಯಾದ ಆಲೋಚನೆಗಳಿಗೆ ದಾರಿಯೇ ಇಲ್ಲ. ಹೀಗೆ ಎಲ್ಲ ಸುಂದರ ನೋಟಗಳನ್ನು ನೋಡಿಕೊಂಡು ಸಂಜೆ ವೇಳೆಗೆ ಗಂಗಾರಿಯಾ ಸೇರಿಕೊಂಡೆವು.



**ಆಗಸ್ಟ್ 7ನೇ ದಿನ :** ನಾವು ಕುತೂಹಲದಿಂದ ಕಾಯುತ್ತಿದ್ದ ದಿನ ಬಂದೇ ಬಿಟ್ಟಿತು. ''ವ್ಯಾಲಿ ಆಫ್ ಫ್ಲವರ್ಸ್'' ಅನ್ನೋದು ಹಿಮಾಲಯದಲ್ಲಿ ಸಹಜವಾಗಿಯೇ ಪ್ರಕೃತಿಯಲ್ಲಿ ಬೆಳೆದು ನಿಂತ ಹೂವಿನ ತೋಟ. ಸುಮಾರು 12 ಕಿಲೋಮೀಟರ್‌ವರೆಗೂ ಈ ಹೂವಿನ ತೋಟ ವಿಸ್ತಾರವಾಗಿ ಆವರಿಸಿತು. ''ಲಿವಿಂಗ್ ವಿತ್ ಹಿಮಾಯಲನ್ ಮಾಸ್ಟರ್ಸ್'' ಎನ್ನುವ ಪುಸ್ತಕದಲ್ಲಿ ಸ್ವಾಮಿ ರಾಮ ಈ ''ವ್ಯಾಲಿ ಆಫ್ ಫ್ಲವರ್'' ಬಗ್ಗೆ ತುಂಬಾ ಅದ್ಭುತವಾಗಿ ತಿಳಿಸಿದ್ದಾರೆ. ಗಂಗಾರಿಯಾದಿಂದ ಈ ''ವ್ಯಾಲಿ ಆಫ್ ಫ್ಲವರ್ಸ್'' 3 ಕಿಲೋಮೀಟರ್ ದೂರದಲ್ಲಿ ಇರುತ್ತದೆ. ಅಲ್ಲಿಗೆ ನಾವು ನಡೆದುಹೋಗಬಹುದು. ಡೋಲಿಯಲ್ಲಿ ಅಥವಾ ಬುಟ್ಟಿಗಳಲ್ಲಿಯೂ ಹೋಗಬಹುದು. ಆ ದಾರಿಯು ತುಂಬಾ ಕಠಿಣವಾಗಿರುತ್ತದೆ. ಮಧ್ಯಾಹ್ನ ಸರಿಯಾಗಿ 12 ಗಂಟೆಗೆ ಎಲ್ಲರೂ ಅಲ್ಲಿಗೆ ಸೇರಿದೆವು. ಆ ಪ್ರದೇಶವನ್ನು ಸೇರಿದ ಕ್ಷಣವೇ ಅಲ್ಲಿ ತುಂಬಾ ಶಕ್ತಿಯಿಂದ ಕೂಡಿತ್ತು. ಹೂಗಳು ಬಹಳ ಸುಂದರವಾಗಿತ್ತು. ಬಗೆಬಗೆಯ ಬಣ್ಣದ ಹೂಗಳು ಅಲ್ಲಿದ್ದವು. ಸುತ್ತಲು ಹಿಮಾಲಯದ ಬೆಟ್ಟಗಳು ಬಹಳ ಸುಂದರವಾಗಿತ್ತು. ಆ ಸ್ಥಳದಲ್ಲಿ ಎಷ್ಟೋ ಜನ ಋಷಿಗಳು ಧ್ಯಾನ ಮಾಡಿದ್ದರಂತೆ.

ಪತ್ರೀಸರ್ ನಮಗೆ ತಮ್ಮ ವೇಣುಗಾನ ಪ್ರಾರಂಭಿಸಿ, ಧ್ಯಾನ ಮಾಡಲು ಹೇಳಿದರು. ಪ್ರತಿಯೊಬ್ಬರೂ ತುಂಬಾ ಗಾಢವಾಗಿ ಧ್ಯಾನ ಮಾಡಿದರು ಪ್ರತಿಯೊಬ್ಬರು ಈ ಪ್ರದೇಶದಿಂದ "ತಮ್ಮ ಜೀವಿತಾಂತ್ಯದವರೆಗೆ ಬೇಕಾದ ಶಕ್ತಿಯನ್ನು ಸಂಗ್ರಹಿಸಿದ್ದೀರಿ" ಎಂದು ಹೇಳಿದರು. ಪತ್ರೀಜಿ ಸರ್ ಹಾಗೂ ಧ್ಯಾನಿಗಳು ಎಲ್ಲರೂ ಒಟ್ಟಿಗೆ ಸೇರಿ ಆ ಗಂಗಾರಿಯಾಗೆ ತೆರಳಿದೆವು. ರಾತ್ರಿ ಅಲ್ಲಿಯೇ ಉಳಿದೆವು.

**ಆಗಸ್ಟ್ 8ನೇ ದಿನ :** ಬೆಳಗ್ಗೆ ಎದ್ದು ನಾವೆಲ್ಲರೂ ಗೋವಿಂದ ಘಾಟ್‌ಗೆ ಪ್ರಯಾಣ ಬೆಳೆಸಿದೆವು. ಅಲ್ಲಿಂದ ಪಿಪ್ಪಲಕೋಟಿ ಸೇರುವ ವೇಳೆಗೆ ಸಂಜೆಯಾಗಿತ್ತು. ನಾವೆಲ್ಲರೂ ಅಲ್ಲೇ ರಾತ್ರಿಯನ್ನು ಕಳೆದವು. ಅಲ್ಲಿ ಶ್ರದ್ಧಾ ಸಮಾಧಿಯ ಬಗ್ಗೆ ಸರ್ ತಿಳಿಸಿಕೊಟ್ಟರು. ಶ್ರದ್ಧಾ ಎನ್ನುವುದು ಪ್ರಾಪಂಚಿಕ ಹಾಗೂ ಆಧ್ಯಾತ್ಮಿಕ ಜೀವನದಲ್ಲಿ ಇರಬೇಕಾದ ಪ್ರಮುಖ ಅಂಶ. ನಮಗೆ ಜೀವನದಲ್ಲಿ ಶ್ರದ್ಧೆ ಎಂಬುದು ಇದ್ದರೆ, ಎಂತಹಾ ಕೆಲಸವನ್ನಾದರೂ ಪರಿಪೂರ್ಣವಾಗಿ ಮಾಡಬಹುದು. ಸಬೂರಿ ಎಂದರೆ 'ತಾಳ್ಮೆ' ಎಂದರ್ಥ. ಸಹನೆಯೇ ಪ್ರಗತಿ, ಸಹನೆ ನಮ್ಮಲ್ಲಿದ್ದರೆ, ಜೀವನದಲ್ಲಿ ಅತ್ಯುನ್ನತವಾದ ಜ್ಞಾನವುಳ್ಳ ಸ್ಥಿತಿಯನ್ನು ತಲುಪಬಹುದು ಎಂದು ಹೇಳಿದರು.

ಉದಾಹರಣೆಗೆ : ನಾವು ವಾಹನ ಚಲಿಸುತ್ತಿರುವಾಗ ನಮ್ಮ ದೃಷ್ಟಿ ಕೇವಲ ರಸ್ತೆಯ ಮೇಲೆ ಇರಬೇಕು. ಅಲ್ಲಿ ಶ್ರದ್ಧೆ ಇಲ್ಲದಿದ್ದರೆ, ನಮ್ಮ ಗುರಿಯನ್ನು ಮುಟ್ಟಲು ಅಸಾಧ್ಯ ಎಂದರು.

**ಆಗಸ್ಟ್ 9ನೇ ದಿನ :** ಬೆಳಗ್ಗೆ 6 ಘಂಟೆಗೆ ಏಕತಾ ಧ್ಯಾನಕ್ಕೆ ಎಲ್ಲಾ ಧ್ಯಾನಿಗಳು ತಯಾರಿ ನಡೆಸುತ್ತಿರುವ ವೇಳೆಗೆ ಅಲ್ಲಿ ಒಂದು ಘಟನೆ ನಡೆಯಿತು. ವಿಜಯವಾಡ ಸೀನಿಯರ್ ಮಾಸ್ಟರ್ ಆದಂತಹ ಚಲಪತಿರಾವ್ ರವರು ದೇಹತ್ಯಾಗ ಮಾಡಿದರು. ಅದು ಗೊತ್ತಾದ ತಕ್ಷಣ ಅಲ್ಲಿಗೆ ಪತ್ರೀಜಿಸರ್ ಬಂದು ಈ ರೀತಿಯಾಗಿ ಹೇಳಿದರು. ''ಇದು ಬಂಧಾತ್ಮವಲ್ಲ ಮುಕ್ತಾತ್ಮ'' ಅಂದರೆ, ಈ ಆತ್ಮಕ್ಕೆ ಮತ್ತೆ ಜನ್ಮವಿಲ್ಲವೆಂದು, ಈ ಆತ್ಮ ಈ ಜನ್ಮದಲ್ಲಿ ಏನೇನು ಕೆಲಸಗಳು ಮಾಡಬೇಕೋ ಎಲ್ಲವನ್ನು 100% ಪೂರ್ತಿಯಾಗಿ ಮುಗಿಸಿದೆ ಎಂದರು. ನಂತರ, ಧ್ಯಾನ ಮಾಡಿಸಿದರು. ಆಮೇಲೆ ನಾವೆಲ್ಲರೂ ಗಂಗಾತೀರಕ್ಕೆ ಹೋಗಿ ಚಲಪತಿರಾವ್‌ರವರ ದೇಹವನ್ನು ಸಂಸ್ಕಾರಕ್ಕಾಗಿ ಸಿದ್ಧಮಾಡಿದೆವು. ಪತ್ರೀಜಿ ಸರ್ ಅವರು ಅವರ ಅಭಯ ಹಸ್ತದಿಂದ ಚಲಪತಿರಾವ್‌ರನ್ನು ದೇಹಕ್ಕೆ ಅಂತ್ಯಸಂಸ್ಕಾರ ಮಾಡಿದರು. ಚರಿತ್ರೆಯಲ್ಲಿ ಇದೇ ಮೊದಲನೆಯ ಬಾರಿ ಒಬ್ಬ ಗುರು ಶಿಷ್ಯನಿಗೆ ಸಂಸ್ಕಾರ ಮಾಡಿರುವುದು. ಸಾವನ್ನು ಸಹ ಒಂದು ಉತ್ಸವದ ಹಾಗೆ ನಡೆಸಬೇಕು ಎಂದು ಪತ್ರೀಜಿಸರ್‌ರವರು ನಮಗೆಲ್ಲಾ ಕಣ್ಮುಂದೆ ತೋರಿಸಿದರು. ಆದಾದ ನಂತರ, ದ್ವಾರಹಟ್



ಕಡೆಗೆ ಎಲ್ಲರೂ ಪ್ರಯಾಣ ಬೆಳೆಸಿದೆವು. ಸಂಜೆಗೆ ಅಲ್ಲಿ ಸೇರಿದೆವು. ನಂತರ ಅಲ್ಲಿಯೆ ರಾತ್ರಿ ಉಳಿದುಕೊಂಡೆವು.

**ಆಗಸ್ಟ್ 10ನೇ ದಿನ :** ಬೆಳಗ್ಗೆ ತಿಂಡಿಯ ನಂತರ, ಮಹಾವತಾರ್ ಬಾಬಾಜಿರವರ ಗುಹೆಗೆ ಪ್ರಯಾಣ ಬೆಳೆಸಿದೆವು. 22 ಕಿಲೋಮೀಟರ್ ಬಸ್ಸಲ್ಲಿ ಪ್ರಯಾಣ ಮಾಡಿ, ಅನಂತರ, 3 ಕಿಲೋಮೀಟರ್ ಟ್ರಕ್ಕಿಂಗ್ ಮಾಡಿದ ನಂತರ, ಮಹಾವತಾರ್ ಬಾಬಾಜಿಯವರ ಗುಹೆಗೆ ಸೇರಿದೆವು.

ಗುಹೆಯು ತುಂಬಾ ಚಿಕ್ಕದಾಗಿರುವುದರಿಂದ, ಅಲ್ಲಿ ಕೇವಲ 15 ಜನ ಮಾತ್ರ ಕುಳಿತುಕೊಳ್ಳಲು ಸ್ಥಳವಿತ್ತು. ಈ ಗುಹೆಯಲ್ಲಿ ಶಕ್ತಿಯ ಸೆಳೆತ ತುಂಬಾ ಇತ್ತು. ಇದರಿಂದ ಧ್ಯಾನಕ್ಕೆ ಕೂತರೆ, ಏಳಲು ಸಾಧ್ಯವಾಗುತ್ತಿರಲಿಲ್ಲ ಇನ್ನೂ ಧ್ಯಾನ ಮಾಡಬೇಕೆಂದು ಅನಿಸುತ್ತಿತ್ತು. ಎಲ್ಲರೂ ಧ್ಯಾನ ಮಾಡಿ ತೆರಳುತ್ತಿರುವ ವೇಳೆಗೆ ಮಳೆಯು ಶುರುವಾಗಿ ನಿಂತುಹೋಯಿತು. ಮತ್ತೆ ನಾವೆಲ್ಲರೂ ಬೆಟ್ಟದ ಕೆಳಗಿಳಿದು ದ್ವಾರಾಹಟ್ ಸೇರಿದೆವು. ಆಗ ಸಂಜೆಯಾಗಿತ್ತು. ಆ ದಿನ ರಾತ್ರಿ ಎಲ್ಲರೂ ಒಂದೆಡೆ ಸೇರಿದೆವು. ಪತ್ರೀಜಿ ಸರ್‌ರವರು 'ಸಹನೆ' ಬಗ್ಗೆ ಎಲ್ಲರಿಗೂ ತಿಳಿಸಿದರು. ''ಸಹನೆಯೇ ಪ್ರಗತಿ'' ಪ್ರಾಪಂಚಿಕ ಜೀವನದಲ್ಲಿ ಆಧ್ಯಾತ್ಮಿಕ ಜೀವನದಲ್ಲಿ ಸಹನೆಯೇ ತುಂಬಾ ಪ್ರಾಮುಖ್ಯವಾದುದು ಎಂದು ಹೇಳಿದರು. ಆ ನಂತರ, ಎಲ್ಲಾ PYMA ಮಾಸ್ಟರ್‌ಗಳು ಡ್ಯಾನ್ಸ್ ಮಾಡಲು ಶುರು ಮಾಡಿದರು. ಆಮೇಲೆ ದೊಡ್ಡವರು ಸಹ ಸೇರಿ ಡ್ಯಾನ್ಸ್ ಮಾಡಿದರು.

**ಆಗಸ್ಟ್ 11ನೇ ದಿನ :** ಬೆಳಗ್ಗೆ ವೇದಾನಂದಜಿ ಆಶ್ರಮ ಮತ್ತು ಸಾಯಿಬಾಬ ದೇವಸ್ಥಾನಗಳ ದರ್ಶನ ಮಾಡಿಕೊಂಡು ನಾವೆಲ್ಲರೂ ನೈನಿತಾಲ್‌ಗೆ ಹೊರಟೆವು. ಸಂಜೆಗೆ ನೈನಿತಾಲ್ ಸೇರಿದೆವು. ನೈನಿತಾಲ್ ಎಂದರೆ Nine +Tal = ನೈನಿತಾಲ್ ಅಂದರೆ, 9 ಕೆರೆಗಳು. ನೈನಿತಾಲ್ ಒಂದು ಹಿಲ್ ಸ್ಟೇಷನ್. ಅಲ್ಲಿಯ ಹವಾಮಾನ, ಪ್ರಕೃತಿ ಸೌಂದರ್ಯ, ನೈನಾದೇವಿ ಮಂದಿರ ಬಹಳ ಚೆನ್ನಾಗಿದೆ. ಆ ದಿನ ರಾತ್ರಿ ನೈನಿತಾಲ್‌ನಿಂದ ದೆಹಲಿಗೆ ಹೊರಟೆವು.

• **ಆಗಸ್ಟ್ 12ನೇ ದಿನ :** ನಾವು ನೈನಿತಾಲ್‌ನಿಂದ ದೆಹಲಿ ಸೇರಿದೆವು. ಆ ದಿನ ರಾತ್ರಿ ಪತ್ರೀಜಿ ಸರ್‌ರವರ ಧ್ಯಾನ ಕಾರ್ಯಕ್ರಮ ಬಹಳ ರಂಜನೀಯವಾಗಿತ್ತು. ಪತ್ರೀಜಿ ಸಂದೇಶದ ನಂತರ, ಮನೋರಂಜನಾ ಕಾರ್ಯಕ್ರಮ ಪ್ರಾರಂಭವಾಯಿತು. ಇದು ಯುವಕರಿಗಿಂತ ವಯೋವೃದ್ಧರ ನೃತ್ಯ ಕಾರ್ಯಕ್ರಮ ಎಂದು ಹೇಳಬಹುದು. ಇಲ್ಲಿ ವಯಸ್ಸಿನ ಬೇಧ ಮರೆತು ಎಲ್ಲರೂ ನೃತ್ಯ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

**ಆಗಸ್ಟ್ 13ನೇ ದಿನ :** ಬೆಳಗಿನಿಂದಲೇ ಎಲ್ಲರೂ ಅವರವರ ಸ್ಥಳಗಳಿಗೆ ಟ್ರಕ್ಕಿಂಗ್‌ನ ಸವಿನೆನಪುಗಳೊಂದಿಗೆ ನಿರ್ಗಮಿಸಿದರು.

– ಅನಿತ, ಬೆಂಗಳೂರು.

## ಹಿಮಾಲಯ ಯಾತ್ರೆಯ ಅನುಭವಗಳು

### ಬದರೀನಾಥ್ ಮತ್ತು ಹಿಮಾಲಯದ ಅನುಭವಗಳು



ನನ್ನ ಹೆಸರು ನಿರ್ಮಲಗುಪ್ತ. ಹಿಮಾಲಯ ಯಾತ್ರೆಯಲ್ಲಿ ನಾನು ಮತ್ತು ನನ್ನ ಯಜಮಾನರು ಸಹ ಬಂದಿದ್ದರು. ದಿಲ್ಲಿಯಲ್ಲಿ ಅಕ್ಷರಧಾಮ ಬಹಳ ಚೆನ್ನಾಗಿದೆ. ಅಲ್ಲಿ ಸಹ ಆಧ್ಯಾತ್ಮಿಕತೆಯನ್ನು ತುಂಬಾ ಚೆನ್ನಾಗಿ ವಿವರಿಸಲ್ಪಟ್ಟಿದೆ. ಪ್ರತಿಯೊಬ್ಬರೂ ಸಹ ನೋಡಲೇಬೇಕಾದ ಪ್ರದೇಶ. ಋಷಿಕೇಶ್‌ನಲ್ಲಿ ಪತ್ರೀಜಿಯವರ ಸಂದೇಶವು ಬಹಳ ಚೆನ್ನಾಗಿತ್ತು. ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಹೀರೋ ವಿಲನ್ ಜೊತೆಗೆ ಹೋಲಿಸಿ ಬಹಳ ಚೆನ್ನಾಗಿ ವಿಷದೀಕರಿಸಿದರು. ಬದ್ರಿನಾಥ್ ವ್ಯಾಸ ಗುಹೆಯಲ್ಲಿ ಧ್ಯಾನ ಮಾಡಿದೆವು. ಅಲ್ಲಿಯೂ ಸಹ ಬಹಳ.Energy (ಶಕ್ತಿ) ಇದೆ. ಗೋವಿಂದ ಘಾಟ್‌ನಿಂದ ಗಂಗಾರಿಯಾಕ್ಕೆ 14 ಕಿ.ಮೀ. ಕುದುರೆ ಮೇಲೆ ಹೋಗಿ ಬಂದೆವು. ಪ್ರಕೃತಿ ಬಹಳ ಚೆನ್ನಾಗಿದೆ. ಬೆಟ್ಟಗಳು, ನದಿಗಳು, ಚೆನ್ನಾಗಿದೆ. ಪತ್ರೀಜಿಸಾರ್‌ರವರು ಹೆಜ್ಜೆಹೆಜ್ಜೆಗೂ ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿದರು. ಗಂಗಾರಿಯಾದಿಂದ Valley of Flowers 3-4 ಕಿ.ಮೀ ನಡೆದು ಹೋಗಿರುತ್ತೇವೆ. ಇದುವರೆಗೂ ನಾನು ಯಾವಾಗಲೂ ಟ್ರಕ್ಕಿಂಗ್ ಮಾಡಿರಲಿಲ್ಲ, ಇದೇ ಮೊದಲ ಬಾರಿ, ಆದರೆ, ಬಹಳ ಸುಸ್ತಾಗಿದ್ದರೂ ಸಹ ಅಲ್ಲಲ್ಲಿ ಧ್ಯಾನ ಮಾಡಿಕೊಳ್ಳುತ್ತಾ, ಪತ್ರಿಸಾರ್ ಜೊತೆಯಲ್ಲಿ ಹೋದೆವು. ಪ್ರಕೃತಿಯು ಸಹ ನಾವು ಹೊರಟಾಗ ಬಹಳ ಸಹಕರಿಸಿದಳು. ದ್ವಾರಘಾಟ್‌ನಿಂದ 22 ಕಿ.ಮೀ. ಬಸ್ ಪ್ರಯಾಣ ಅನಂತರ, 3 ಕಿ.ಮೀ. ನಡೆದು ಬೆಟ್ಟ ಗುಡ್ಡಗಳನ್ನು ಹತ್ತುತ್ತಾ, ಆ ಮಹಾವತಾರ ಬಾಬಾಜಿ ಗುಹೆಗೆ ಸೇರಿಕೊಂಡೆವು. ಅಲ್ಲಿ ಎಲ್ಲರೂ ಧ್ಯಾನವನ್ನು ಮಾಡಿದೆವು. ಅಲ್ಲಿಯೂ ಬಹಳ ಶಕ್ತಿ (Energy) ಇದೆ.ಅಲ್ಲಿ ಧ್ಯಾನದಲ್ಲಿ ನಾನು ಒಂದು ಪ್ರಶ್ನೆಯನ್ನು ಹಾಕಿಕೊಂಡೆನು. ನಾನು ಎಂದೂ ನಿಮ್ಮನ್ನು ನೋಡಿರಲಿಲ್ಲ, ನಿಮ್ಮ ದರ್ಶನವನ್ನು ಕೊಟ್ಟು ಒಳ್ಳೆಯ ಸಂದೇಶ ನೀಡಬೇಕೆಂದು ಕೇಳಿದೆನು. ಆಕಾರವು ಕಾಣಿಸುತ್ತಾ ಕಾಂತಿಯ ರೂಪದಲ್ಲಿ ಬಾಬಾರವರು ದರ್ಶನ ಕೊಟ್ಟರು. ನಾನು ಎಂದು ಇಷ್ಟು ದೂರ ನಡೆದವಳಲ್ಲ, ಟ್ರಕ್ಕಿಂಗ್ ಸಹ ನಾನು ಮಾಡಿರಲಿಲ್ಲ, ಮನೆಯಲ್ಲಾಗಲಿ ಆಫೀಸಿನಲ್ಲಾಗಲಿ ಸ್ವಲ್ಪ ಮೆಟ್ಟಿಲು ಹತ್ತಿದರೂ ಸಹ ಆಯಾಸವಾಗುತ್ತಿತ್ತು. ಯಾವ

ಪ್ರಯಾಣವು ಇಲ್ಲದೆ, ಧ್ಯಾನ ಯಾತ್ರೆಯು ದಿಗ್ವಿಜಯದಿಂದ ನಡೆಯಿತು. ಇಂತಹ ಇಷ್ಟು ಘನ ವಿಜಯ ಯಾತ್ರೆಯು ಪೂರ್ತಿಯಾಗಲು ಪ್ರೋತ್ಸಾಹ ಕೊಟ್ಟಂತಹ ಪತ್ರೀಜಿ ಸರ್ ರವರಿಗೆ ನನ್ನ ಶತಕೋಟಿ ವಂದನೆಗಳನ್ನು ಅರ್ಪಿಸುತ್ತಿದ್ದೇನೆ.

## ಯಾತ್ರೆಯಲ್ಲಿ ನನ್ನ ಅನುಭವಗಳು

**ವ್ಯಾಲಿ ಆಫ್ ಫ್ಲವರ್ಸ್:**

ನನ್ನ ಹೆಸರು ಅನಿತ. ನಾನು ಧ್ಯಾನ ಮಾಡ್ತಾ ಇರುವಾಗ ಸರ್ ಹಿಮಾಲಯದ ಎತ್ತರ ಬೆಳೆದು ಆಕಾಶ ಟಚ್ ಆಗ್ತಾ ಇದ್ದರು. ಆಗ ಎಲ್ಲಾ ಬೆಟ್ಟಗಳು, ಗಿಡ, ಮರ, ಹೂವು, ನದಿ ನೀರು ಎಲ್ಲಾ ಬಗ್ಗಿ ಅವರ ತಲೆಯ ಮೇಲೆ ಎನರ್ಜಿ ಸುರಿಯುತ್ತಾ ಇದೆ. ಸರ್ ಕೆಳಗೆ ನಾನು ನಿಂತಿದ್ದೇನೆ. ಸರ್ ಕಾಲಿನಿಂದ ಎನರ್ಜಿ ನನ್ನ ತಲೆಯ ಮೇಲೆ ಬೀಳ್ತಾ ಇದೆ. ನನ್ನ ಕೆಳಗೆ ಎಲ್ಲಾ ಪಿರಮಿಡ್ ಮಾಸ್ಟರ್‌ಗಳು ಒಬ್ಬರ ಕೆಳಗೆ ಒಬ್ಬರು ಚೈನ್ ತರಹ ನಿಂತಿದ್ದಾರೆ. ಎನರ್ಜಿ ಒಬ್ಬರಿಂದ ಒಬ್ಬರಿಗೆ ಪಾಸ್ ಆಗಿ ಕೊನೆಗೆ ಅದು ಪ್ರಪಂಚವೆಲ್ಲಾ ಹರಡಿ "ಪ್ರತಿ ಗಿಡ ಮರ ಬೆಟ್ಟ ಎಲ್ಲಾ ಮುಂದೆ ಮಾನವ ಜನ್ಮ ತಾಳುತ್ತದೆ. ಧ್ಯಾನ ಮಾಡದೇ ಇರುವವರು ಧ್ಯಾನಿಗಳಾಗುತ್ತಾರೆ" ಎಂದು ಸರ್ ಹೇಳಿದರು.



ಪತ್ರಿಸರ್ ವಾಮನ ರೂಪ ತಾಳಿ ಆಕಾಶವನ್ನು ಛತ್ರಿ ತರಹ ಹಿಡಿದಿದ್ದಾರೆ. ಅವರ ಕೆಳಗೆ ನಾವೆಲ್ಲಾ ಇದ್ದೇವೆ. ಅವರೆನ್ನೆಲ್ಲಾ ನಾನು ಕಾಪಾಡ್ತೀನಿ ಅಂತ ಸರ್ ಹೇಳಿದರು. ಹಿಮಾಲಯದಲ್ಲಿರೋ ಯೋಗಿಗಳು ಋಷಿಗಳು ಎಲ್ಲಾ ಸರ್ ದರ್ಶನಕ್ಕೆ ಎಷ್ಟೋ ವರ್ಷಗಳಿಂದ ಕಾದಿದ್ದರು. ಸರ್ ದರ್ಶನದಿಂದ ಅವರಿಗೆ ತುಂಬಾ ಸಂತೋಷವಾಗಿ ನಮ್ಮ ಜನ್ಮ ಸಾರ್ಥಕವಾಯಿತು. ಎಲ್ಲಾ ಪಿರಮಿಡ್ ಮಾಸ್ಟರ್ಸ್‌ಗೂ ಇದು ಕೊನೆಯ ಜನ್ಮ ಅಂತ ಹೇಳಿದರು.

**ಗಂಗೇ ಮೆಸೇಜ್:**

ಗಂಗಾ ನದಿಯಿಂದ ಈ ರೀತಿ ಮೆಸೇಜ್ ಬಂದಿದೆ. ನಾನು ಹಿಮಾಲಯದಲ್ಲಿ ಹುಟ್ಟಿ, ಅಲ್ಲಿಂದ ಹರಿದು ದೇಶವೆಲ್ಲಾ ಹರಿಯುತ್ತೇನೆ. ಆಗ ಹರಿಯುವಾಗ ಹಿಮಾಲಯದ ಎನರ್ಜಿ ತೆಗೆದುಕೊಂಡು ದೇಶವೆಲ್ಲಾ ಹರಡುತ್ತೇನೆ. ಆದರೆ, ಜನ ಮಾತ್ರ ಪ್ರಕೃತಿಯನ್ನು ಮಾಲಿನ್ಯ ಮಾಡುತ್ತಾ ಅವರ ಕಷ್ಟಗಳನ್ನು ಅವರೇ ತಂದುಕೊಳ್ತಾ ಇದ್ದಾರೆ. ಆದರೆ, ಪ್ರಳಯ ಕಾಲದಲ್ಲಿ ನಾನು ಉಗ್ರವಾಗಿ ರುದ್ರ ತಾಂಡವ ನರ್ತನ ಮಾಡುತ್ತೇನೆ ಎಂದು ಗಂಗೆ ಹೇಳಿದಳು. ಹಾಗೆ ಮಾಡಬೇಡ ತುಂಬಾ ಜನ ಸಾಯುತ್ತಾರೆ ಎಂದು ಹೇಳಿದ್ದಕ್ಕೆ ಅದು ಸೃಷ್ಟಿಯ ಧರ್ಮ. ಅಧರ್ಮ ಹೆಚ್ಚಾದಾಗ ವಿನಾಶ ಆಗಲೇಬೇಕು. ಧರ್ಮ ಸಂಸ್ಥಾಪನೆ ಆಗಿ ಮುಂದಿನ ಸತ್ಯ ಯುಗ ಪ್ರಾರಂಭವಾಗುತ್ತದೆ. ಧ್ಯಾನಿಗಳಿಗೆ ನಾನು ಜ್ಞಾನ ಗಂಗೆಯಾಗಿ ಹರಿದು ಅವರನ್ನೆಲ್ಲಾ ಕಾಪಾಡುತ್ತೇನೆ ಎಂದು ಗಂಗಾ ನದಿ ಹೇಳಿದಳು.

**ಮಹಾವತಾರ್ ಬಾಬಾ ಗುಹೆ:**

ಪತ್ರೀಜಿಸರ್‌ಗೆ ಸ್ವಾಗತ ಹೇಳಲು ಹೂವುಗಳೆಲ್ಲಾ ಮೇಲಿಂದ ಉದುರಿ 2 ಕಡೆನೂ ಹರಡಿ ಮಧ್ಯೆ ಸಾರ್‌ಗೆ ಹೋಗಲು ದಾರಿ ಬಿಟ್ಟಿವೆ. ಅದೇ ತರಹ ಅಲ್ಲಿರುವ ಹಣ್ಣುಗಳೆಲ್ಲಾ ಬಂದು 2 ಕಡೆ ಅಲಂಕರಿಸಿ ಜೋಡಿಸಿ ನಿಂತಿವೆ. ಅಲ್ಲಿರುವ ನವಿಲುಗಳೆಲ್ಲಾ ಗರಿ ಬಿಚ್ಚಿ ನೃತ್ಯ ಮಾಡುತ್ತಾ ಗ್ರೇಟ್ ಮಾಸ್ಟರ್‌ಗೆ ಸ್ವಾಗತ ಹೇಳಿವೆ. ಸದಾನಂದ ಯೋಗಿಗಳು ಕೊಳಲನ್ನು ಊದುತ್ತಾ ಅಲ್ಲಿಗೆ ಬಂದರು. ಗುರುಗಳು ವೀರಬ್ರಹ್ಮೇಂದ್ರ ಸ್ವಾಮಿಗಳು ಮತ್ತು ಅನೇಕ ಋಷಿ ಮುನಿಗಳು, ಏಳನೇ ಮತ್ತು 11ನೇ ಡೈಮೆನಷನ್‌ನಿಂದ ಅನೇಕ ಮಾಸ್ಟರ್‌ಗಳು ಬಂದು ಅಲ್ಲಿ ನಿಂತರು. ಫ್ಲೈಯಿಂಗ್ ಸಾಸರ್ ತರಹ ಆಕಾಶದಿಂದ ಕೆಳಗೆ ಇಳಿದು, ಅದರಿಂದ ಚಿಕ್ಕ ಚಿಕ್ಕ ಮಾನವರು ಬಂದು ಇಳಿದು ಅಲ್ಲಿ ಸೇರಿದರು. ರೆಕ್ಕೆ ಇರುವ ಮನುಷ್ಯರು ಬಂದು ಸೇರಿದರು. ಇವರೆಲ್ಲಾ ಪತ್ರೀಸರ್ ಬರುವರೆಂದು ಸ್ವಾಗತ ಕೋರಲು ಅಲ್ಲಿ ಸೇರಿರುವರು.

ಸರ್ ಗವಿಯ ಹತ್ತಿರ ಬರುವ ಹೊತ್ತಿಗೆ ಆಕಾಶದಿಂದ ಕೆಂಪು ಗುಲಾಬಿಗಳು ಉದುರಿ ಸುಸ್ವಾಗತ ಎನ್ನುವ ಅಕ್ಷರಗಳ ಹಾಗೆ ಜೋಡಿಸಿಕೊಂಡು ಆಗ ಪತ್ರೀಜಿಸಾರ್ ಬಂದಾಗ ಮಹಾವತಾರ್ ಬಾಬಾ ಬಂದು ಸ್ವಾಗತ ಹೇಳಿ, ನೀವು ''ವಿಶ್ವ ವಿಖ್ಯಾತ ಧ್ಯಾನ ಶಿಲ್ಪಿ'' ಎಂದು ಸಾರ್‌ಗೆ ಗೌರವ ನೀಡಿ ಗುಹೆಗೆ ಆಹ್ವಾನಿಸಿದರು. ಆ ಬೆಟ್ಟದಲ್ಲಿ ಪ್ರಕೃತಿ ತುಂಬಾ ಎನರ್ಜಿ ಹರಿಯುತ್ತಾ ಇತ್ತು. ಬಂದವರಿಗೆಲ್ಲಾ ಎನರ್ಜಿ ಶರೀರದಲ್ಲಿ ತುಂಬಿದೆ.

ನಾನು ಗುಹೆಯಲ್ಲಿ ಧ್ಯಾನ ಮಾಡುತ್ತಿರುವಾಗ, ಗುಹೆಯ ಮೇಲಿಂದ ಸಣ್ಣಗೆ ಹನಿಗಳು ಉದುರಿ ತಲೆಯ ಮೇಲೆ ಬಿದ್ದವು. ಅದು ಶರೀರದಲ್ಲಿ ಸೇರಿದಾಗ ನೀನು ಸಾಧಿಸಬೇಕಾದುದನ್ನು ಸಾಧಿಸುತ್ತೀಯಾ ಎಂದು, ಬೇಕಾದುದನ್ನು ಸಾಧಿಸುವೆ ಎಂದು ಬಾಬಾ ಆಶೀರ್ವಾದ ಮಾಡಿದರು.

ನನಗೆ ಬಾಬಾ ದರ್ಶನ ಬೇಕೆಂದಾಗ, ಮೊದಲು ನನ್ನ ಮುಂದೆ ಬಾಬಾರವರ ಪಾದಗಳು ದೊಡ್ಡದಾಗಿ ಕಾಣಿಸಿದವು. ಸಂತೋಷದಿಂದ ತಲೆ ಎತ್ತಿ ನೋಡಿದರೆ, ಬಾಬಾರವರು ಗುಹೆಯ ಟಾಪ್ ಒಡೆದು ಆಕಾಶದವರೆಗೂ ನಿಂತಿದ್ದರು.

ಆಡ ಅವರು 16 ದಿವಸದಲ್ಲಿ ನಿನಗೆ ಒಳ್ಳೆಯ ಎಕ್ಸ್‌ಪೀರಿಯನ್ಸ್ ಆಗುತ್ತದೆ ಎಂದು ಹೇಳಿದರು.

– ಅನಿತ, ಗೌರಿಬಿದನೂರು



ನನ್ನ ಹೆಸರು ಉಷ. ನಾನು ಪತ್ರೀಜಿ ಸರ್ ಜೊತೆ ಹಿಮಾಲಯ ಟೂರ್ ಹೋಗಿದ್ದೆ. ಸರ್ ಜೊತೆ ಇರುವ ಪ್ರತಿಕ್ಷಣವನ್ನು ಆನಂದವಾಗಿ ಅನುಭವಿಸಿದ್ದೇನೆ. ಅದನ್ನು ಮಾತುಗಳಲ್ಲಿ ಹೇಳಲು ಅಸಾಧ್ಯ. ನನಗೆ ಈ ಟ್ರಿಪ್ ನಲ್ಲಿ ಒಂದು ಅನುಭವ ಆಗಿದೆ. ಅದನ್ನು ಇಲ್ಲಿ ಬರೆದಿದ್ದೇನೆ. ಈ ಟ್ರಿಪ್ ನಲ್ಲಿ ನಾವು ಎಲ್ಲರೂ

ಮಹಾವತಾರ್ ಬಾಬಾಜಿ ಬೆಟ್ಟಕ್ಕೆ ಹೋದೆವು. ಅಂದರೆ, ಬಾಬಾಜಿ ಇಲ್ಲಿ ಧ್ಯಾನ ಮಾಡಿರುವ ಸ್ಥಳ. ಅಲ್ಲಿ ನಾವೆಲ್ಲಾ ಧ್ಯಾನಕ್ಕೆ ಕುಳಿತೆವು. ನಾನು ಧ್ಯಾನಕ್ಕೆ ಕುಳಿತುಕೊಳ್ಳುವ ಮುಂಚೆ ಅಂದುಕೊಂಡೆ, ಬಾಬಾಜಿ ನೀವು ಇಲ್ಲೇ ಇದ್ದೀರಾ ಎಂದು ತಿಳಿದುಕೊಳ್ಳಬೇಕಾದರೆ, ನೀವು ನನಗೆ ಯಾವ ರೂಪದಲ್ಲಾದರೂ ಬಂದು, ಒಂದು ಅನುಭವ ಕೊಡಿ ಎಂದು ಕೊಂಡೆ. ನಾನು ಚೆನ್ನಾಗಿ ಧ್ಯಾನದಲ್ಲಿದ್ದೆನೆ. Body Full Movement ಆಗುತ್ತಾ ಇದೆ. ಸ್ವಲ್ಪ ಸಮಯದ ನಂತರ, ನನ್ನ ಹೊಟ್ಟೆ ಭಾಗದ ಸ್ವಲ್ಪ ಮೇಲೆ ಬಲದಿಂದ ಎಡಕ್ಕೆ ಸವರಿದಂತಾಯಿತು. ಆಗ ನನಗೆ ಬಾಬಾಜಿಯೇ ಇಲ್ಲಿ ಬಂದಿದ್ದಾರೆ ಎಂದು ನನಗೆ ಅನುಭವ ಆಯಿತು. ಆ ಬೆಟ್ಟ ಹತ್ತುವಾಗ ಎಷ್ಟೋ ಆನಂದ ಮತ್ತು ಹಿಮಾಲಯದ ಪ್ರಕೃತಿ ಸೌಂದರ್ಯ, ತುಂಬಿ ಹರಿಯುವ ನದಿಗಳು ಎಲ್ಲವೂ ನೋಡುತ್ತಾ ನಮ್ಮ ವಿಹಾರ ಯಾತ್ರೆಯನ್ನು ಆನಂದದಿಂದ ಅನುಭವಿಸಿದೆವು.

-ವೈ. ಎಸ್. ಉಷಾ, ಗೌರಿಬಿದನೂರು.

### ಹಿಮಾಲಯ ಟ್ರಕ್ಕಿಂಗ್ ನಲ್ಲಿನ ಅನುಭವ



ನನ್ನ ಹೆಸರು ಜಿ.ವಿ. ಮಾಲಿನಿ. ನಮ್ಮ ಊರು ಗೌರಿಬಿದನೂರು. ನಾನು ಸುಮಾರು 3 ವರ್ಷಗಳಿಂದ ಧ್ಯಾನಾಭ್ಯಾಸದಲ್ಲಿ ತೊಡಗಿರುತ್ತೇನೆ.

ನನಗೆ ಚಿಕ್ಕಂದಿನಿಂದಲೂ ಹಿಮಾಲಯ ಪರ್ವತವನ್ನು ನೋಡುವ ಹಂಬಲವಿತ್ತು. ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ ಹಾಗೂ "ಯೋಗಿಯ ಆತ್ಮಕಥೆ" ಎಂಬ ಪುಸ್ತಕಗಳನ್ನು ಓದಿದ ನಂತರ, ಆ ಆಸೆ ಇನ್ನೂ ತೀವ್ರವಾಯಿತು.

ಹಿಮಾಲಯ ಯಾತ್ರೆಯಲ್ಲಿ ನಾನು ಹೆಚ್ಚು ಧ್ಯಾನ ಮಾಡಬೇಕೆಂದು ನಿರ್ಧರಿಸಿದ್ದೆ, ಆದರೆ, ಅಲ್ಲಿನ ನದಿಗಳು, ಪರ್ವತ ಶ್ರೇಣಿಗಳು ಮೋಡಗಳನ್ನೆಲ್ಲ ನೋಡುತ್ತಾ ನನ್ನನ್ನು ನಾನು ಮರೆತೆ. ಆದರೂ, ಸಮಯ ದೊರೆತಾಗ ಕಣ್ಮುಚ್ಚಿ ಕುಳಿತಾಗಲೆಲ್ಲ ತತ್‌ಕ್ಷಣದಲ್ಲಿ Third Eye Visions ಅನೇಕ ಅನುಭವಗಳು ದೊರೆಯುತ್ತಿದ್ದವು. ಅಲ್ಲಿ ಅಧಿಕ ಮಟ್ಟದ ಎನರ್ಜಿ ಲೆವೆಲ್ ಇದೆ ಎಂಬುದು ಗೊತ್ತಾಗುತ್ತಿತ್ತು.

ಬದ್ರಿನಾಥ್‌ದಲ್ಲಿ Oxygenನ ಕೊರತೆಯಿಂದ ಸ್ವಲ್ಪ ನಡೆದರೂ ಆಯಾಸವಾಗುತ್ತಿತ್ತು. ಬದ್ರಿನಾರಾಯಣನ ದರ್ಶನದ ನಂತರ, ದೇವಸ್ಥಾನದ ಅಂಗಳದಲ್ಲಿ ನಾವೆಲ್ಲರೂ ಧ್ಯಾನಕ್ಕೆ ಕುಳಿತಾಗ ನನಗೆ ಅನೇಕ Astral Master ದರ್ಶನದ ಭಾಗ್ಯ ಸಿಕ್ಕಿತು. ಜೊತೆಗೆ ಪತ್ರೀಜಿ ಸರ್ ಅವರ ದರ್ಶನವು ಆದಾಗ ನನಗಾದ ಆನಂದ ಹೇಳತೀರದು.

ಮರುದಿನ Valley of Flowers ಹೋಗುವ ಕಾರ್ಯಕ್ರಮವಿತ್ತು. ಅಲ್ಲಿಗೆ ಕುದುರೆಯ ಮೇಲೆ ಕುಳಿತು ಹೋಗಬೇಕು ಎಂದು ಹೇಳುತ್ತಿದ್ದರು. ಆದರೂ, ನನಗೆ ನಡೆಯಲೇಬೇಕು ಎನ್ನುವ ಛಲವಿತ್ತು. ಅದೇ ದಿನ ಸಂಜೆ ಪತ್ರೀಜಿ ಸರ್ ಅವರು ಸತ್ಸಂಗದಲ್ಲಿ ಅವರು ಹೇಳುತ್ತಾ "Trekking" ಮಾಡುವುದು ಕಷ್ಟವೇ. ಆದರೆ, ಆತ್ಮಜ್ಞಾನಿಗಳಲ್ಲದವರಿಗೆ ಮನೆಯಲ್ಲಿ ಫ್ಯಾನ್ ಕೆಳಗೆ ಕುಳಿತು ಕೊಳ್ಳುವುದೂ ಕಷ್ಟವೇ. ಈ ಮಾತು ಕೇಳಿ ನನಗೆ ನಡೆಯುತ್ತಾ ಹೋಗುತ್ತೇನೆಂಬ ಪೂರ್ಣ ವಿಶ್ವಾಸ ಮೂಡಿತು. ಜೊತೆಗೆ ಸ್ನೇಹಿತೆ ಗೌರಮ್ಮನವರು ನನ್ನ ಜೊತೆಯಲ್ಲಿ ಬಂದದ್ದು ವಿಶೇಷ ಅನುಭವಕ್ಕೆ ದಾರಿಮಾಡಿಕೊಟ್ಟಿತು. ಒಟ್ಟಾರೆ, ಹಿಮಾಲಯ ಪರ್ವತ Trekking ನಲ್ಲಿ ಪತ್ರೀಜಿ ಸರ್ ಅವರ ಜೊತೆಯಲ್ಲಿರಬೇಕೆಂಬ ನನ್ನ ಕನಸು ನನಸಾಗಿದಲ್ಲದೆ, ನನಗೆ/ನನ್ನಂಥವರಿಗೆ ಅದ್ಭುತವಾದ ಆಧ್ಯಾತ್ಮಿಕ ವಿಚಾರಗಳು ಪತ್ರೀಜಿಸರ್ ಅವರಿಂದ ತಿಳಿದು ಬಂದಿದೆ. ನನಗೆ ನನ್ನ ಜೀವನದ ಬಗ್ಗೆ ಧನ್ಯತೆಯ ಭಾವನೆ ಮೂಡಿತು.

ಇಂತಹ ವಿಶೇಷ ಮರೆಯಲಾಗದ ಅವಕಾಶವನ್ನು ಮಾಡಿಕೊಟ್ಟ ಎಲ್ಲ ಮಾಸ್ಟರ್ ಗಳಿಗೂ ಧನ್ಯವಾದಗಳು, ಅಭಿನಂದನೆಗಳು

ಮಾಲಿನಿ ಜಿ.ವಿ. ಗೌರಿಬಿದನೂರು

### "ಹಿಮಾಲಯದ ಅಂದವು ವರ್ಣನಾತೀತ"

ನನ್ನ ಹೆಸರು ಅನಿತ. ಹಿಮಾಲಯ ಧ್ಯಾನ ಯಾತ್ರೆಯಲ್ಲಿ ಪಾಲ್ಗೊಂಡಿದ್ದು ನನ್ನ ಅದೃಷ್ಟವೆಂದು ಭಾವಿಸುತ್ತೇನೆ. ಬದರಿನಾಥ್‌ಗೆ ಹೋಗುವ ದಾರಿಯಲ್ಲಿ ಬೆಟ್ಟಗಳು ಪ್ರಕೃತಿ ಸೌಂದರ್ಯದ, ಜಲಪಾತಗಳು, ನೋಡುತ್ತಿದ್ದರೆ ಯಾವುದೋ ಬೇರೆ ಲೋಕದಲ್ಲಿ ಇರುವಂತೆ ಎನಿಸುತ್ತಿತ್ತು. ಒಂದು ಕಡೆ ಧ್ಯಾನ ಮಾಡಿದಾಗ ನನ್ನ ಒಳಗಿಂದ ಒಂದು ಶರೀರವು ಬಿಡುಗಡೆಯಾಗಿ ಪಕ್ಷಿಯಂತೆ ಹಾರುತ್ತಾ ಹೋಗಿ ನೆಟ್ಟಗಿರುವ ಬೆಟ್ಟವನ್ನು ಸ್ಪರ್ಶಿಸಿ, ಆ ಶಕ್ತಿಯನ್ನು ಹಿಂಬಾಲಿಸುತ್ತಾ ಪುನಃ ನನ್ನ ಶರೀರಕ್ಕೆ ಒಂದು ಸೇರಿಕೊಂಡಿತು. ಈ ಅನುಭವ ಬಹಳ ಸಾಹಸಮಯವಾಗಿತ್ತು. ಗಂಗಾರಿಯಾಕ್ಕೆ ಹೋಗುವ ದಾರಿಯಲ್ಲಿ 14 ಕಿ.ಮೀ. ನಡೆದುಹೋಗುತ್ತಿದ್ದರೆ, ಒಂದು ತರಹದ ಶಕ್ತಿಯಲ್ಲಿ ನಡೆಯುತ್ತಿರುವಂತೆ ಎನಿಸುತ್ತಿತ್ತು. ಈ 12 ದಿವಸಗಳು ಪ್ರಯಾಣದಲ್ಲಿ ಐದು ದಿವಸಗಳು ನಾನು ಊಟವನ್ನು ತೆಗೆದುಕೊಳ್ಳಲಿಲ್ಲ ನೀರು ಸಹ ದಿವಸ ಪೂರ್ತಾ ಅರ್ಧ ಲೀಟರ್‌ನಂತೆ ತೆಗೆದುಕೊಂಡೆನು. ಆದರೂ, ಕಷ್ಟವಿಲ್ಲದೆ ನಡೆದೆನು. ಪ್ರಕೃತಿಯಲ್ಲಿ ಬಹಳ ಅದ್ಭುತವಾದ ಶಕ್ತಿ ಇರುತ್ತದೆ. ಪ್ರಕೃತಿಯಲ್ಲಿ ನಾವು ಯಾವಾಗ ಇರುತ್ತೇವೆಯೋ ಆಶಕ್ತಿಯನ್ನು ನಾವು ಪಡೆಯುತ್ತೇವೆ ಎಂಬುದಕ್ಕೆ ಇದೇ ನಿದರ್ಶನ. ವ್ಯಾಲಿ ಆಫ್ ಫ್ಲವರ್ಸ್‌ನಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದರೆ, ಸುಮಾರು ಆ ಜಾಗವೆಲ್ಲಾ ಹೂವಿನಿಂದ ಕೂಡಿರುವ ಹಾಗೆ ಕಾಣಿಸುತ್ತಿತ್ತು. ವೃತ್ತಾಕಾರದಲ್ಲಿ ಶಕ್ತಿಯು ಪ್ರತಿ ಹೂವಿನ ಬಳಿಯು ಕಾಣಿಸುತ್ತಿತ್ತು. ಅಲ್ಲಿರುವ ಪ್ರತಿಯೊಂದು ಹೂಗಳು 'ಪತ್ರಿಸಾರ್' ರವರ ಬರುವಿಕೆಗಾಗಿ, ತಮ್ಮ ಬಿಡುಗಡೆಗೋಸ್ಕರ ಕಾಯುತ್ತಿದ್ದವು. ಅಲ್ಲಿ ಸುತ್ತ ಇರುವ ಹಿಮಾಲಯದ ಅಂದವನ್ನು ವರ್ಣಿಸಲು ಸಾಧ್ಯವಿಲ್ಲ. ಬಹಳ ಅದ್ಭುತವಾಗಿದೆ. 'ಮಹಾವತಾರ್ ಬಾಬಾಜಿ' ಯವರ ಗುಹೆಯಲ್ಲಿ ಧ್ಯಾನ ಮಾಡುವಾಗ ಮಹಾವತಾರ್ ಬಾಬಾಜಿಯವರು ನೆಟ್ಟಗೆ ನಿಂತಿರುವ ಹಾಗೆ ಕಾಣಿಸಿಕೊಂಡರು. ಅವರ ಶರೀರವು ಒಟ್ಟಾರೆ ಒಂದು ಕಾಂತಿಯ ಹಾಗೆ ಉರಿಯುತ್ತಿರುವಂತೆ ಕಾಣುತ್ತಿತ್ತು. ಆ ಗುಹೆಯೆಲ್ಲಾ ಕಾಂತಿ ವಲಯದಿಂದ ಕೂಡಿತ್ತು. ಆ ಸ್ಥಳವು ಆತ್ಮಸ್ಪಷ್ಟವಾದ ಶಕ್ತಿಯ ವಲಯಗಳಿಂದ ಕೂಡಿದೆ.

**ಅನಿತ, ಬೆಂಗಳೂರು.**

# ಮೆದುಳಿನಲ್ಲಿ ಬೀಟಾ ತರಂಗಗಳು

'ಮೆದುಳು' ಎಂಬುವುದು ಒಂದು ವಿದ್ಯುತ್ ರಾಸಾಯನಿಕ ಅಂಗ.

ನಮ್ಮ ಪಂಚ ಜ್ಞಾನೇಂದ್ರಿಯಗಳಾಗಿರುವ ಕಣ್ಣು, ಕಿವಿ, ನಾಲಿಗೆ, ಮೂಗು, ಮತ್ತು ಚರ್ಮ ಇವುಗಳಿಂದ ಪ್ರತಿ ಕ್ಷಣ ಮೆದುಳಿಗೆ ಸಮಾಚಾರ ಹೋಗಿ ಅಲ್ಲಿ ನಿರಂತರ ವಿಶ್ಲೇಷಣೆ ನಡೆಯುತ್ತದೆ.

ಕೇವಲ ಕಣ್ಣುಗಳಿಂದ 85% ಪ್ರಾಪಂಚಿಕ ಸಮಾಚಾರ ಮೆದುಳಿಗೆ ಹೋಗುತ್ತದೆ. ಇದನ್ನು ನಿಲ್ಲಿಸಲು ನಾವು ಧ್ಯಾನವನ್ನು ಮಾಡುವಾಗ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತೇವೆ. ಹಾಗೆಯೇ, ನಾವು ಧ್ಯಾನ ಸ್ಥಿತಿಯಲ್ಲಿ ಇರುವಾಗ ಉಳಿದ ಇಂದ್ರಿಯಗಳನ್ನು ಕೂಡ ಕಟ್ಟಿಹಾಕಿ, ಇವನ್ನು ಉಪಯೋಗಿಸದೇ ಇರುವುದರಿಂದ, ಇವುಗಳಿಂದ ಯಾವ ತರಹದ ಸಮಾಚಾರ ಮೆದುಳಿಗೆ ಹೋಗುವುದಿಲ್ಲ. ಇದರಿಂದ, ಮೆದುಳಿನ ಕೆಲಸದ ಒತ್ತಡ ಕಡಿಮೆ ಆಗುತ್ತಿರುತ್ತದೆ. ಮೆದುಳು ವಿಶೇಷವಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತದೆ.

## ''ಬೀಟಾ ತರಂಗಗಳು''

ಮೆದುಳಿನಿಂದ ...'ಆಲ್ಫಾ', 'ಬೀಟಾ', 'ಥೀಟಾ' ಮತ್ತು ಡೆಲ್ಟಾ ಎಂಬುವ ನಾಲ್ಕು ತರಹದ ತರಂಗಗಳು ಹೊರಗೆ ಬರುತ್ತವೆ. ನಾವು ಚಟುವಟಿಕೆಯಿಂದ ಇರುವಾಗ ಮೆದುಳಿನಿಂದ 'ಬೀಟಾ' ತರಂಗಗಳು 30Hz frequency ಯಲ್ಲಿ ಹೊರಬರುತ್ತವೆ.

ಯಾವಾಗ ನಾವು ಸಮಾಚಾರಗಳನ್ನು ಮೆದುಳಿಗೆ ಹೋಗಲು ಬಿಡದೆ ಜಾಗ್ರತೆ ವಹಿಸುತ್ತಿದ್ದೇವೋ. ಅಲ್ಲಿಯ ತನಕ 30 'ಬೀಟಾ' ತರಂಗಗಳನ್ನು ಉತ್ಪತ್ತಿ ಮಾಡಿರುವ ನಮ್ಮ ಮೆದುಳು ಇನ್ನು ತನ್ನ ತರಂಗಗಳ ಸಾಂದ್ರತೆಯನ್ನು ಸ್ವಲ್ಪ ಸ್ವಲ್ಪವಾಗಿ ಕಡಿಮೆ ಮಾಡಿಕೊಳ್ಳುತ್ತಾ, ಒಂದು ಸೆಕೆಂಡಿಗೆ 4 Hz 'ಥೀಟಾ' ತರಂಗಗಳನ್ನು ಉತ್ಪತ್ತಿ ಮಾಡುವ ಸ್ಥಿತಿಗೆ ಸೇರಿಕೊಳ್ಳುತ್ತದೆ. ಇದನ್ನೇ ನಾವು ಆಲೋಚನಾ ರಹಿತ ಸ್ಥಿತಿ ಎನ್ನುತ್ತೇವೆ. ನಾವು ಈ ಸ್ಥಿತಿಗೆ ತಲುಪಿದ ತಕ್ಷಣ ಮುಚ್ಚಿರುವ ಬಾಗಿಲುಗಳನ್ನು ತೆಗೆದರೆ ಒಂದೇ ಸಲ ಪೈಪಿನಲ್ಲಿ ನೀರು ಹೇಗೆ ಕೊಚ್ಚಿಕೊಂಡು ಹೋಗುತ್ತದೋ.. ಹಾಗೆಯೇ ವಿಶ್ವಮಯ ಪ್ರಾಣಶಕ್ತಿ ಸಹಿತಾ ನಮ್ಮ 'ಬ್ರಹ್ಮರಂಧ್ರ' ದಿಂದ ನಮ್ಮ ಒಳಗೆ ಪ್ರವಹಿಸಲು ಪ್ರಾರಂಭಿಸುತ್ತದೆ.

ಆಲೋಚನಾ ರಹಿತ ಸ್ಥಿತಿಯನ್ನು ಅತಿ ಕಡಿಮೆ ಸಮಯದಲ್ಲಿ ಹೊಂದಲು, ನಮ್ಮ ಸುತ್ತ ಇರುವ ಅತಿ ಶಕ್ತಿವಂತವಾಗಿರುವ 'ಕಾಸ್ಮಿಕ್ ಎನರ್ಜಿ ಫೀಲ್ಡ್' ಎಂಬ ಒಂದು ಅಸ್ತ್ರವಿದೆ. ಅದು ಒಂದು ರಸಾಯನಿಕ ಕ್ರಿಯೆಯಲ್ಲಿ ರಿಯಾಕ್ಷನ್ ವೇಗವಾಗಿ ಆಗಲು ಕ್ಯಾಟಲಿಸ್ಟ್‌ನ್ನು ಉಪಯೋಗಿಸಿದ ಹಾಗೆ ಇರುತ್ತದೆ!

ಒಂದು ಭೂತ ಕನ್ನಡಿ ಹೀಗೆ ಸೌರಶಕ್ತಿಯನ್ನು ಕೇಂದ್ರೀಕೃತ ಮಾಡುತ್ತದೋ ... ಆ ಅಸ್ತ್ರ ಸಹಿತ ಅದಕ್ಕಿಂತ ಹೆಚ್ಚು ಕೆಲಸ ಮಾಡುತ್ತದೆ. ಆ ಅಸ್ತ್ರದ ಹೆಸರೇ... ಪಿರಮಿಡ್ !

-ಕನ್ನಡಕ್ಕೆ : ಪುಷ್ಪಮೋಹನ್, ಬೆಂಗಳೂರು

## ಪಿರಮಿಡ್ ಅದ್ಭುತ ಶಕ್ತಿ !

'ಪಿರಮಿಡ್' ಎಂಬುವುದು ನಾಲ್ಕು ಮುಖಗಳು 51 ಡಿಗ್ರಿ, 52 ನಿಮಿಷಗಳು ಕೋನದಿಂದಿರುವ ಆಗಿರುವ ಒಂದು ನಿರ್ಮಾಣ. ಪಿರಮಿಡ್‌ಗಳ ತಯಾರಿನಲ್ಲಿ ನಿರ್ಮಾಣದಲ್ಲಿ ಈ ಕೋನವನ್ನು ಸರಿಯಾಗಿ ಇಡುವುದು ತುಂಬಾ ತುಂಬಾ ಅವಶ್ಯಕ.



ಪಿರಮಿಡ್‌ನ ಆಕಾರ (ಕೋನ) + ಭೂ ಅಯಸ್ಕಾಂತ ಕ್ಷೇತ್ರದಿಂದ ಪಿರಮಿಡ್ ಒಂದು ಅದ್ಭುತ ಶಕ್ತಿ ಕೇಂದ್ರವಾಗುತ್ತದೆ. ಪಿರಮಿಡ್‌ನ ನಿಪುಣತೆ ಅದರ ಹೆಸರಿನಲ್ಲೇ ಇದೆ.

'ಪೈರೋ' = 'ಅಗ್ನಿ ಅಥವಾ ಶಕ್ತಿ'
'ಅಮಿಡ್' = 'ಮಧ್ಯಭಾಗದಲ್ಲಿ ಅಥವಾ ಗರ್ಭದಲ್ಲಿ'
'ರಮಿಡ್' = 'ಗರ್ಭದಲ್ಲಿರುವ ಶಕ್ತಿ'

ಪಿರಮಿಡ್‌ನಲ್ಲಿ ಮೂಲದಿಂದ 1/3 ಎತ್ತರದಲ್ಲಿ ಕಾಸ್ಮಿಕ್ ಎನರ್ಜಿ ಕೇಂದ್ರೀಕೃತವಾಗಿರುತ್ತದೆ. ಈ ಸ್ಥಳವನ್ನು 'ಕಿಂಗ್ಸ್ ಚೇಂಬರ್' ಅನ್ನುತ್ತವೆ. ಈ ಸ್ಥಳದಲ್ಲಿ ಕುಳಿತುಕೊಂಡು ಧ್ಯಾನವನ್ನು ಮಾಡಿದರೆ, ಧ್ಯಾನದ ಅನುಭವಗಳು ಅದ್ಭುತವಾಗಿ ಇರುತ್ತದೆ. ಪಿರಮಿಡ್‌ಗೆ ಕೋನದ ಜೊತೆ ಅವುಗಳ ತಯಾರಿಗೆ ಬಳಸಲ್ಪಟ್ಟ ಮೆಟೀರಿಯಲ್, ಅದರಲ್ಲಿ ಇಟ್ಟಿರುವ ಕ್ರಿಸ್ಟಲ್ಸ್... ಸ್ಫಟಿಕಗಳು ಇವುಗಳಿಂದ ಅಧಿಕ ಶಕ್ತಿ ಉತ್ಪತ್ತಿ ಆಗುತ್ತದೆ.

ಕ್ರಿಸ್ಟಲ್ಸ್ ಎಂಬುವವು ಎನರ್ಜಿ ಜನರೇಟರ್ಸ್ ಅವು ಧ್ಯಾನಾನುಭವಗಳಿಗಾಗಿಯೇ ಅಲ್ಲದೇ ಸ್ವಸ್ಥತಾ ಶಕ್ತಿಗಾಗಿ ಸಹಿತಾ ತುಂಬಾ ಉಪಯೋಗ ವಾಗುತ್ತದೆ. ಅದಕ್ಕಾಗಿಯೇ, ನಾವು ಪಿರಮಿಡ್‌ಗಳ ನಿರ್ಮಾಣದಲ್ಲಿ ಕ್ರಿಸ್ಟಲ್ಸ್ ಉಪಯೋಗಿಸುತ್ತೇವೆ. ಪಿರಮಿಡ್‌ಗಳು ಉತ್ತರಕ್ಕೆ ಸರಿಹೊಂದಿಕೊಂಡಿದ್ದರೆ ಒಳ್ಳೆಯದು. ಪಿರಮಿಡ್‌ಗಳನ್ನು ನಿರ್ದಿಷ್ಟವಾಗಿ, ಕೊಂಡುಕೊಳ್ಳುವಾಗ ನಿಪುಣರನ್ನು ಭೇಟಿ ಆದರೆ ಒಳ್ಳೆಯದು.

-ಕನ್ನಡಕ್ಕೆ : ಪುಷ್ಪಮೋಹನ್, ಬೆಂಗಳೂರು.



# ಸಸ್ಯಾಹಾರಿಗಳಾಗಿರಿ

## ಧೀರನ ಅಹಿಂಸೆ



**ಮಹಾತ್ಮಾ ಗಾಂಧಿ**

ಧೀರನ ರೀತಿಯಲ್ಲಿ ಅಹಿಂಸೆಯನ್ನು ಆಚರಿಸಲು, ಒಬ್ಬ ವ್ಯಕ್ತಿಯು ತನ್ನ ನಿತ್ಯ ಜೀವನದಲ್ಲಿ ಏನನ್ನು ಮಾಡಬೇಕು?... ಅಂದರೆ, ಯಾವ ಕನಿಷ್ಠ ಕಾರ್ಯಕ್ರಮಗಳನ್ನು ಪಾಲಿಸಬೇಕು?

ಧೈರ್ಯವಾಗಿ ಅಹಿಂಸಾ ಪ್ರವೃತ್ತಿಯನ್ನು ಬೆಳೆಸಿಕೊಳ್ಳಲು ಒಬ್ಬ ವ್ಯಕ್ತಿಗೆ ಕನಿಷ್ಠ ಅಗತ್ಯತೆ ಏನೆಂದರೆ, ಮೊದಲಿಗೆ, ಹೇಡಿಯಂತೆ, ಅಧೈರ್ಯವಾಗಿ ಆಲೋಚಿಸುವುದನ್ನು ಬಿಟ್ಟುಬಿಡಬೇಕು. ಮತ್ತು, ಸ್ವಚ್ಛ ಮನಸ್ಸು ಹೊಂದಿ, ತನ್ನ ಬದುಕಿನಲ್ಲಿ ಮಾಡುವ ಯಾವುದೇ ಕೆಲಸದಲ್ಲಿ , ಅಂದರೆ, ಅದು ಚಿಕ್ಕದಾಗಿರಲಿ ಅಥವಾ ದೊಡ್ಡದಾಗಿರಲಿ, ಪ್ರತಿಯೊಂದೂ ಕೆಲಸದಲ್ಲಿಯೂ ಸಹ ಆತನ ನಡವಳಿಕೆಯನ್ನು ನಿಯಂತ್ರಿಸಿಕೊಳ್ಳಬೇಕು.

ಅನುಯಾಯಿ ಆಗಿರುವವನು, ತನ್ನ ಮೇಲಿರುವವನಿಂದ ತಾನು ಹಳಗಿಸಲ್ಪಡುವುದನ್ನು, ಯಾವುದೇ ರೀತಿಯಲ್ಲಿ ಕೋಪಗೊಳ್ಳದೆಯೇ, ವಿರೋಧಿಸಬೇಕು. ಎಷ್ಟೇ ಆದಾಯ ತರುವಂಥಹ ಹುದ್ದೆಯಲ್ಲಿದ್ದರೂ ಸಹ, ಆತನು ಅಂತಹ ಹುದ್ದೆಯನ್ನು ತ್ಯಜಿಸಲು ಸಿದ್ಧನಿರಬೇಕು. ತನ್ನದೆನ್ನುವ ಎಲ್ಲವನ್ನೂ ತ್ಯಜಿಸುವಾಗ, ಉದ್ಯೋಗದಾತನ ಮೇಲೆ ಆ ಅನುಯಾಯಿಗೆ ಯಾವುದೇ ರೀತಿಯ ವೈಮನಸ್ಯ ಇರಬಾರದು ಅಥವಾ ಪ್ರಜ್ಞಾ ಪೂರ್ವಕವಾದ ಒಂದು ಚಿಕ್ಕ ಅಸಂತೋಷವೂ ಸಹ ಇರಬಾರದು. ಇದೇ ಆತನಲ್ಲಿರುವ ಧೀರತನದ ಅಹಿಂಸೆ ಆಗಿದೆ.

ಸಹ-ಪ್ರಯಾಣಿಕನೊಬ್ಬ ನನ್ನ ಮಗನಿಗೆ ತೊಂದರೆ ನೀಡಿ, ಬೆದರಿಸುತ್ತಾನೆ ಮತ್ತು ನಂತರ, ನನ್ನ ಮೇಲೆ ಆಕ್ರಮಣ ನಡೆಸುತ್ತಾನೆ ಎಂದು ಊಹಿಸಿಕೊಳ್ಳಿ. ಆತನ ವಿರುದ್ಧ ಯಾವುದೇ ರೀತಿಯ ಕೆಟ್ಟ ಆಲೋಚನೆಯನ್ನು ವ್ಯಕ್ತಪಡಿಸದೆ, ಆತನ ಹೊಡೆತವನ್ನು ಗೌರವಯುತವಾಗಿ, ಸಾವಧಾನವಾಗಿ ತೆಗೆದುಕೊಳ್ಳುತ್ತೇನೆ ಎಂದಿಟ್ಟುಕೊಳ್ಳಿ. ಆಗ ನಾನು ಧೀರತನದ ಅಹಿಂಸೆಯನ್ನು ವ್ಯಕ್ತಪಡಿಸಿದ್ದೇನೆ ಎನ್ನಬಹುದು. ಇಂತಹ ಘಟನೆಗಳು ದಿನನಿತ್ಯ ಸಂಭವಿಸುತ್ತಲೇ ಇರುತ್ತವೆ ಅಲ್ಲದೆ, ಸುಲಭವಾಗಿ ಹೆಚ್ಚುತ್ತಲೇ ಹೋಗುತ್ತವೆ. ಹೊಡೆತಕ್ಕೆ ಮರು ಹೊಡೆತವನ್ನು ನೀಡಲು ಸಮರ್ಥನಿದ್ದರೂ ಸಹ, ಆತನಿಗೆ ಹೊಡೆಯದೆ ಸುಮ್ಮನಿದ್ದು, ಪ್ರತಿಯೊಂದೂ ಬಾರಿಯೂ ಸಹ ನನ್ನ ತಾಳ್ಮೆಯನ್ನು ಉಳಿಸಿಕೊಳ್ಳಲು ನಾನು ಸಮರ್ಥನಾದರೆ, ಧೀರತನದ ಅಹಿಂಸೆಯನ್ನು ನಾನು ಬೆಳೆಸಿಕೊಂಡಿದ್ದೇನೆ ಎನ್ನಬಹುದು. ಇಂತಹ ಅಹಿಂಸೆಯಿಂದ, ಬಹುತೇಕ ಹಲ್ಲೆಕೋರರ ಮಾನ್ಯತೆಯನ್ನು ಪಡೆಯುವಲ್ಲಿ ನಾನು ಎಂದಿಗೂ ವಿಫಲನಾಗುವುದಿಲ್ಲ.



### ಸಸ್ಯಾಹಾರೀ ಜೀವನಕ್ರಮ

ಮನುಷ್ಯನು ನೀರು ಮತ್ತು ಗಾಳಿ ಇಲ್ಲದೆ ಬದುಕುವುದು ಕಷ್ಟಕರ ಎಂಬುದು ನಿಜ. ಆದರೂ, ಆತನ ದೇಹವನ್ನು ಸುಪುಷ್ಟಗೊಳಿಸುವುದು ಆಹಾರ ಮಾತ್ರವೇ. ಆದುದರಿಂದ, 'ಆಹಾರವೇ ಜೀವ' ಎಂಬ ಹೇಳಿಕೆ ಇದೆ.

ಭೌತಿಕಶಾಸ್ತ್ರ ಮತ್ತು ಶಾರೀರಿಕ ಶಾಸ್ತ್ರಗಳೆರಡೂ ಸಹ ಸಾಕ್ಷ್ಯವನ್ನು ಒದಗಿಸಿರುವಂತೆ, ಸಸ್ಯಾಹಾರವೇ ಮಾನವನಿಗೆ ಶ್ರೇಯಸ್ಕರ ಎಂಬುದನ್ನು ಪ್ರತಿಪಾದಿಸುವ ವಾದಗಳು ಪ್ರಬಲಗೊಂಡಿವೆ ಮಾನವನು ಸಸ್ಯಾಹಾರಿಯಾಗಿಯೇ ಬದುಕಬೇಕು ಎಂಬುದನ್ನು ಪ್ರಕೃತಿಯು ನಿಯಮಿಸಿದೆ ಎಂಬುದನ್ನು ಅರಿಯಲು, ಮಾನವನ ಹಲ್ಲುಗಳು, ಹೊಟ್ಟೆ ಕರುಳು ಇತ್ಯಾದಿಗಳ ವಿನ್ಯಾಸಗಳನ್ನು ಪರಿಗಣಿಸಬಹುದಾಗಿದೆ.

ಸಸ್ಯಾಹಾರ ಎಂದರೆ, ದ್ವಿದಳ ಮತ್ತು ಏಕದಳ ಧಾನ್ಯಗಳು, ತಿನ್ನಬಹುದಾದ ಗೆಡ್ಡೆ-ಗೆಣಸುಗಳು ಮತ್ತು ಸೊಪ್ಪುಗಳು, ಅಲ್ಲದೆ, ತಾಜಾ ಅಥವಾ ಒಣಗಿದ ಹಣ್ಣುಗಳೂ ಸಹ ಸಸ್ಯಾಹಾರವೇ ಆಗಿದೆ.

ಒಣಹಣ್ಣುಗಳಲ್ಲಿ, ಬಾದಾಮಿ, ಆಕ್ರೋಟು ಮತ್ತು ಪಿಸ್ತಾ ಇವೆಲ್ಲವೂ ಸೇರಿವೆ.

ನಾನು ಯಾವಾಗಲೂ ಸಹ ಶುದ್ಧ ಸಸ್ಯಾಹಾರದ ಪರವಾಗಿಯೇ ಇದ್ದೇನೆ. ಆದರೆ, ಅನುಭವದಿಂದ ಮತ್ತೊಂದು ಮಾತನ್ನು ಹೇಳುತ್ತೇನೆ. ಸಸ್ಯಾಹಾರದ ಜೊತೆಗೆ, ಹಾಲು ಮತ್ತು ಹಾಲಿನಿಂದ ಮಾಡಿದ ಪದಾರ್ಥಗಳು ಅಂದರೆ, ಮೊಸರು, ಮಜ್ಜಿಗೆ ಮತ್ತು ತುಪ್ಪ ಇತ್ಯಾದಿಗಳನ್ನು ಬಳಸುವುದರಿಂದ ದೇಹದ ಆರೋಗ್ಯವನ್ನು ಉತ್ತಮವಾಗಿ ಇಟ್ಟುಕೊಳ್ಳಬಹುದು.

ನಮ್ಮ ಸಸ್ಯಾಹಾರದ ಪಟ್ಟಿಯಲ್ಲಿ ತರಕಾರಿಗಳು ಮತ್ತು ಹಣ್ಣುಗಳು ಮೂರನೆಯದಾಗಿ ಬರಬೇಕು. ತಾಜಾ ತರಕಾರಿಗಳ ಜೊತೆಯಲ್ಲಿ ಸಾಕಷ್ಟು ಸೊಪ್ಪನ್ನು ಪ್ರತಿನಿತ್ಯವೂ ಸಹ ಸೇವಿಸಬೇಕು. ಸಾಕಷ್ಟು ಪ್ರಮಾಣದಲ್ಲಿ ಪೌಷ್ಟಿಕಾಂಶಗಳನ್ನು ನೀಡಬಲ್ಲ ಸಾಧಾರಣವಾದ, ತಾಜಾ ತರಕಾರಿಗಳನ್ನು ತೆಗೆದುಕೊಳ್ಳಬಹುದು.

ಹಣ್ಣುಗಳ ಬಗ್ಗೆ ಹೇಳಬೇಕಾದರೆ, ನಮ್ಮ ನಿತ್ಯದ ಆಹಾರದೊಂದಿಗೆ, ಆಯಾಯ ಕಾಲಮಾನದಲ್ಲಿ ಲಭ್ಯವಾಗುವ ಹಣ್ಣುಗಳನ್ನೇ ತೆಗೆದುಕೊಳ್ಳುವುದು ಉತ್ತಮ. ನಸುಕು ಬೆಳಗಿನ ವೇಳೆಯೇ ಹಣ್ಣುಗಳನ್ನು ತಿನ್ನಲು ಸೂಕ್ತ ಸಮಯವಾಗಿದೆ. ಬೆಳಗಿನ ಉಪಾಹಾರವಾಗಿ ತೆಗೆದುಕೊಳ್ಳುವ ಹಣ್ಣು ಮತ್ತು ಹಾಲು ಸಂಪೂರ್ಣ ತೃಪ್ತಿಯನ್ನು ನೀಡುತ್ತವೆ. ಮಧ್ಯಾಹ್ನದ ಊಟವನ್ನು ಬೇಗ ತೆಗೆದುಕೊಳ್ಳುವವರು, ಹಣ್ಣು-ಹಾಲಿನ



ಉಪಾಹಾರವನ್ನು ಮಾತ್ರ ಸ್ವೀಕರಿಸುವುದು ಒಳ್ಳೆಯದು. ಇವುಗಳಲ್ಲಿ ಹೆಚ್ಚಿನ ಪಿಷ್ಟ ಪದಾರ್ಥ ಇರುವುದರಿಂದ, ಬ್ರೆಡ್‌ನ ಬದಲಾಗಿ ಇವನ್ನು ತೆಗೆದುಕೊಳ್ಳಬಹುದು. ಹಾಲು ಮತ್ತು ಬಾಳೆಹಣ್ಣು ಎರಡನ್ನೂ ಸ್ವೀಕರಿಸುವುದರಿಂದ ಒಂದು ಪರಿಪೂರ್ಣವಾದ ಆಹಾರವನ್ನು ತೆಗೆದುಕೊಂಡಂತೆಯೇ ಸರಿ.

– ಕನ್ನಡಕ್ಕೆ ಎ.ಸತ್ಯನಾರಾಯಣ

ನಿರ್‌ವಾಜೀವನ್ ಪಬ್ಲಿಷಿಂಗ್ ಹೌಸ್ ಪ್ರಕಾಶಿಸಿರುವ, ತಮ್ಮ ಆತ್ಮಕಥೆಯಾಗಿ ಮಹಾತ್ಮಾ ಗಾಂಧಿಯವರು ಬರೆದಿರುವ 'ದಿ ಸ್ಟೋರಿ ಆಫ್ ಮೈ ಎಕ್ಸ್‌ಪೆರಿಮೆಂಟ್ಸ್ ವಿಥ್ ಟ್ರೂಥ್' ಎಂಬ ಪುಸ್ತಕದಿಂದ ಈ ಭಾಗವನ್ನು ಕೃತಜ್ಞತಾಪೂರ್ವಕವಾಗಿ ಆಯ್ದುಕೊಳ್ಳಲಾಗಿದೆ.

– ಸಂ.

## ಬಳ್ಳಾರಿಯಲ್ಲಿ 9ನೇ ವರ್ಷದ 12 ಗಂಟೆಗಳ ಧ್ಯಾನ ಕಾರ್ಯಕ್ರಮ

ಬಳ್ಳಾರಿಯ ಪತಂಜಲಿ ಪಿರಮಿಡ್ ಧ್ಯಾನ ಕೇಂದ್ರದಲ್ಲಿ ದಿನಾಂಕ: 16-08-09 ರಂದು ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಪ್ರತಿ ವರ್ಷದಂತೆ ಈ ವರ್ಷವೂ ಸಹ, 12 ಗಂಟೆಗಳ ಕಾಲ ಧ್ಯಾನ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಇದು 9ನೇ ವರ್ಷದ 12 ಗಂಟೆ ಧ್ಯಾನ ಕಾರ್ಯಕ್ರಮವಾಗಿರುತ್ತದೆ. ಈ ಕಾರ್ಯಕ್ರಮದಲ್ಲಿ ಸುಮಾರು 74 ಜನ ಧ್ಯಾನಿಗಳು ಭಾಗವಹಿಸಿದ್ದರು. ಅದರಲ್ಲಿ ಸುಮಾರು 12 ರಿಂದ 15 ಜನ ಧ್ಯಾನಿಗಳು ಬೆಳಿಗ್ಗೆ 5 ಗಂಟೆಯಿಂದ ಸಾಯಂಕಾಲ 5 ಗಂಟೆಯವರೆಗೆ 12 ಗಂಟೆಗಳ ಕಾಲ ಧ್ಯಾನದಲ್ಲಿ ಕುಳಿತಿರುವುದು ವಿಶೇಷವಾಗಿತ್ತು.

ಈ ಕಾರ್ಯಕ್ರಮದಲ್ಲಿ ಪತಂಜಲಿ ಪಿರಮಿಡ್ ಧ್ಯಾನಕೇಂದ್ರದ ನಿರ್ಮಾಪಕರಾದ ಶ್ರೀ ಕೃಷ್ಣಮೋಹನ್ ಹಾಗೂ ನಿರ್ವಾಹಕರಾದ ಶ್ರೀ ಪಂಪಾರೆಡ್ಡಿ ಮತ್ತು ಶ್ರೀ ಸೂರ್ಯನಾರಾಯಣ ಅವರ ನೇತೃತ್ವದಲ್ಲಿ ನೆರವೇರಿತು.

–ಪಿ. ರಾಜೇಂದ್ರಗೌಡ, ಬಳ್ಳಾರಿ

# ವಿದ್ಯಾರ್ಥಿಗಳಿಗೆ ಧ್ಯಾನವು ಅತ್ಯಂತ ಪ್ರಮುಖ ಅವಶ್ಯಕ

ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಪ್ರಸ್ತುತ ಪರಿಸ್ಥಿತಿಗಳಲ್ಲಿ ವಿದ್ಯಾರ್ಥಿಗಳು ಬಲು ಜಟಿಲವಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಎಲ್ಲ ಕ್ಷೇತ್ರಗಳಲ್ಲಿ ಕೂಡ ವಿದ್ಯಾರ್ಥಿಗಳು ಅತ್ಯುತ್ತಮವಾಗಿ ಮುಂದಿವರೆಯಬೇಕೆಂದು ಪ್ರತಿಯೊಬ್ಬರು ಆಶಿಸುತ್ತಾರೆ. ತಂದೆ ತಾಯಿಗಳು ತಮ್ಮ ಆಸೆಗಳನ್ನು ಮಕ್ಕಳ ಮೇಲೆ ಹೇರುವುದು ಅಭ್ಯಾಸವಾಗಿ ಬಿಟ್ಟಿದೆ. ಸದಾ ಮೊದಲನೇ ರ್‍ಯಾಂಕ್‌ನಲ್ಲೇ ಪಾಸಾಗಬೇಕು. ಎಲ್ಲ ಸ್ಪರ್ಧೆಗಳಲ್ಲೂ ಉತ್ತಮ ಫಲಿತಾಂಶಗಳೇ ಬರಬೇಕೆಂದು ಗುರುಹಿರಿಯರು ಅವರ ಕುತ್ತಿಗೆಯ ಮೇಲೆ ಕುಳಿತಿರುತ್ತಾರೆ. ಮಕ್ಕಳ ಕುತ್ತಿಗೆಯ ಮೇಲೆ ಈ ಸ್ಪರ್ಧೆ ಎಂಬ ಕತ್ತಿಯನ್ನು ಇಡುವುದರಿಂದ, ಅವರಲ್ಲಿ ಅನೇಕ ರೀತಿಯ ಮಾನಸಿಕ ತೊಂದರೆಗಳುಂಟಾಗಿ, ನ್ಯೂನತೆಯು ಉಂಟಾಗುತ್ತದೆ. ನಿರಾಶೆ, ನಿಸ್ಪೃಹತೆ, ಸೇಡು, ದ್ವೇಷ, ಅವಿಧೇಯರಾಗಿರುವುದು, ಆಸಕ್ತಿ ಇಲ್ಲದಿರುವುದು, ಪರೀಕ್ಷೆ ಎಂದೊಡನೆ ಭಯಭೀತರಾಗುವುದನ್ನು ನಾವೆಲ್ಲರೂ ಕಾಣುತ್ತಿದ್ದೇವೆ. ಕಡೆಗೆ ನಿಸ್ಸಹಾಯಕರಾಗಿ ಆತ್ಮಹತ್ಯೆಗೂ ಶರಣಾಗುತ್ತಿದ್ದಾರೆ. ಇಂತಹ ಸವಾಲುಗಳನ್ನು ಧೈರ್ಯವಾಗಿ ಎದುರಿಸಬೇಕಾದರೆ, ಮಕ್ಕಳು ತಮ್ಮಲ್ಲಿರುವ ಆತ್ಮಶಕ್ತಿಯನ್ನು ಕುರಿತು ತಿಳಿಯಬೇಕಾಗಿದೆ. ಈಗ ದೊರೆಯುತ್ತಿರುವ ಆಧುನಿಕ ಶಿಕ್ಷಣ ಹಾಗೂ ಪುಸ್ತಕಗಳ ಮೂಲಕ ಸಿಗುವ ಜ್ಞಾನದಿಂದ ಮಕ್ಕಳಿಗೆ ಧೈರ್ಯ ತಂದುಕೊಳ್ಳಲು ಸಹಾಯಕವಾಗುತ್ತಿಲ್ಲ.

ಆದ್ದರಿಂದ, ಅವರ ವ್ಯಕ್ತಿತ್ವವನ್ನು ಮೆರಗುಗೊಳಿಸಿ, ಮಾನಸಿಕ ಶಕ್ತಿಯನ್ನು ಹೆಚ್ಚಿಸಿ, ಬುದ್ಧಿಯ ವಿಕಾಸಕ್ಕೆ ಪ್ರೋತ್ಸಾಹಿಸಿ, ಅವರ ಕಾಲ ಮೇಲೆ ಅವರು ನಿಲ್ಲುವ ಹಾಗೆ ಮಾಡಿ, ಅವರಲ್ಲಿರುವ ದೈವತ್ವವನ್ನು ವ್ಯಕ್ತಪಡಿಸುತ್ತಾ ''ಏನು ಬೇಕಾದರೂ ಸಾಧಿಸಬಲ್ಲೆ'' ಎಂಬ ವಿಶ್ವಾಸವನ್ನು ಒದಗಿಸುವ ವಿದ್ಯಾಭ್ಯಾಸ ನಮಗೆ ಬೇಕಾಗಿದೆ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ ಅನಂತವಾದ ಆತ್ಮಶಕ್ತಿಯಿಂದ ಗುರಿಯನ್ನು ಸಾಧಿಸುವ ಯುವಕರನ್ನು ತಯಾರು ಮಾಡಬೇಕೆಂದು ಅದಕ್ಕೆ ಬೇಕಾದ ಮಾರ್ಗ ಕುರಿತಾದ ಕನಸು ಅವರದ್ದಾಗಿತ್ತು.

ಇಂತಹ ನಿಜವಾದ ವಿದ್ಯೆಯನ್ನು, ಅದರ ವಿಧಾನವನ್ನು ನಿಜವಾಗಿಸಬೇಕಾದರೆ, ಪ್ರತಿ ಶಾಲೆಯಲ್ಲೂ ಧ್ಯಾನ



ಮಂದಿರಗಳನ್ನು ನಿರ್ಮಿಸಬೇಕಾಗಿದೆ.

### ಧ್ಯಾನದಿಂದ ಮಿದುಳಿನ ತರಂಗಗಳಲ್ಲಿ ಬದಲಾವಣೆ

ಮಿದುಳು ಎನ್ನುವುದು ಒಂದು ವಿದ್ಯುತ್ ರಸಾಯನಿಕ ಅಂಗ. ನಮ್ಮ ಪಂಚ ಜ್ಞಾನೇಂದ್ರಿಯಗಳು ಆಗಿರುವ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದ ಮೂಲಕ ಪ್ರತಿ ಕ್ಷಣ ಮಿದುಳಿಗೆ ಸಮಾಚಾರ ಒದಗಿಸಿ, ಅಲ್ಲಿ ನಿರಂತರ ವಿಶ್ಲೇಷಣೆ ನಡೆಯುತ್ತಾ ಇರುತ್ತದೆ. ಬರಿ ಕಣ್ಣಿನಿಂದಲೇ ಸುಮಾರು 85% ಪ್ರಾಪಂಚಿಕ ಸಮಾಚಾರ ಮಿದುಳಿಗೆ ತಲುಪುತ್ತದೆ. ಇದಕ್ಕಾಗಿ 85% ದೇಹದ ಶಕ್ತಿಯನ್ನು ಉಪಯೋಗಿಸುತ್ತಿರುತ್ತೇವೆ. ಈ ರೀತಿ ಶಕ್ತಿಯು ಪೋಲಾಗುವುದನ್ನು ತಡೆಗಟ್ಟಲು ಧ್ಯಾನದ ಸಮಯದಲ್ಲಿ ಕಣ್ಣು ಮುಚ್ಚಿಕೊಳ್ಳುತ್ತೇವೆ. ಹಾಗೆಯೇ, ಧ್ಯಾನ ಸ್ಥಿತಿಯಲ್ಲಿ ಮಿಕ್ಕ ಎಲ್ಲ ಇಂದ್ರಿಯಗಳು ತಮ್ಮ ಕೆಲಸಗಳನ್ನು ನಿಲ್ಲಿಸುವ ಕಾರಣ, ಆ ಶಕ್ತಿಯನ್ನು ಹಾಳಾಗದೆ, ಉಳಿಸಿಕೊಳ್ಳಲು ಸಹಾಯ ಮಾಡುತ್ತದೆ. ಇದರಿಂದ, ಮೆದುಳಿನ ಮೇಲಿನ ಒತ್ತಡ ಕಡಿಮೆಯಾಗಿ ವಿಶೇಷವಾಗಿ ವಿಶ್ರಾಂತಿಯನ್ನು ಪಡೆಯುತ್ತದೆ.

### ಆಲೋಚನಾ ರಹಿತ ಸ್ಥಿತಿ

ಮೆದುಳಿನಿಂದ ಆಲ್ಫಾ, ಬೀಟಾ, ತೀಟಾ ಹಾಗೂ ಡೆಲ್ಟಾ ಅನ್ನುವ ನಾಲ್ಕು ಬಗೆಯ ತರಂಗಗಳು ಚಲಿಸುತ್ತಿರುತ್ತವೆ. ನಾವು ಚುರುಕಾಗಿ ಕೆಲಸಮಾಡುವ ವೇಳೆಯಲ್ಲಿ ಬೀಟಾ ತರಂಗಗಳು 30Hz Frequencyಯಲ್ಲಿ ಚಲಿಸುತ್ತವೆ. ಪ್ರಾಪಂಚಿಕ ಸಮಾಚಾರವನ್ನು ಮೆಲುಕು ಹಾಕುತ್ತಾ ಒಂದು ಸೆಕೆಂಡಿಗೆ 30Hz ಬೀಟಾ ತರಂಗಗಳನ್ನು ಉತ್ಪತ್ತಿ ಮಾಡುವ ಮೆದುಳಿಗೆ ಯಾವ



ಸಮಾಚಾರವನ್ನೂ ಕೊಡದಿದ್ದಾಗ, ಬೀಟಾ ತರಂಗಗಳು ಕ್ರಮೇಣ ಕಡಿಮೆಯಾಗಿ, ಸೆಕೆಂಡಿಗೆ 4Hz ಗೆ ಇಳಿಯುತ್ತದೆ. ಇದನ್ನೇ ನಾವು '' ಆಲೋಚನಾ ರಹಿತ ಸ್ಥಿತಿ '' ಎನ್ನುತ್ತೇವೆ.

ನಾವು ಈ ಸ್ಥಿತಿಯನ್ನು ತಲುಪಿದ ಕೂಡಲೇ, ಮುಚ್ಚಿಟ್ಟ ಬಾಗಿಲನ್ನು ತೆರೆದ ಕೂಡಲೇ ಒಂದೇಸಲಕ್ಕೆ ಪೈಪಿನೊಳಕ್ಕೆ ನೀರು ಹೇಗೆ ಕೊಚ್ಚಿಕೊಂಡು ಹೋಗುತ್ತದೆಯೋ ಹಾಗೆಯೇ ''ವಿಶ್ವಮಯ ಪ್ರಾಣಶಕ್ತಿ'' (Cosmic Energy) ನಮ್ಮ ಬ್ರಹ್ಮರಂಧ್ರದ ಮೂಲಕ ನಮ್ಮೊಳಕ್ಕೆ ಪ್ರವಹಿಸುತ್ತದೆ.

ಆಲೋಚನಾರಹಿತ ಸ್ಥಿತಿಯನ್ನು ಅತಿ ಕಡಿಮೆ ಅವಧಿಯಲ್ಲಿ ತಲುಪುವುದಕ್ಕೆ ಹಾಗೂ ನಮ್ಮ ಸುತ್ತಲೂ ಅತಿ ಶಕ್ತಿಯುತವಾದ ಕಾಸ್ಮಿಕ್ ಎನರ್ಜಿ ಫೀಲ್ಡ್‌ನ್ನು ನಿರ್ಮಿಸುವುದಕ್ಕೆ ಇರುವ ಅದ್ಭುತ ಅಸ್ತ್ರವೇ '' ಪಿರಮಿಡ್ '' ! ಒಂದು ರಾಸಾಯನಿಕ ಕ್ರಿಯೆಯಲ್ಲಿ ರಿಯಾಕ್ಷನ್ ವೇಗವಾಗಿ ಆಗುವುದಕ್ಕೆ ಕ್ಯಾಟಲಿಸ್ಟ್‌ನ್ನು ಬಳಸುವಂತೆ ಅಥವಾ ಒಂದು ಭೂತಕನ್ನಡಿಯನ್ನು ಬಿಸಿಲಿಗೆ ಹಿಡಿದಾಗ ಸೌರಶಕ್ತಿಯನ್ನು ಒಂದೆಡೆ ಕೇಂದ್ರೀಕರಿಸುವ ಹಾಗೆ, ಪಿರಮಿಡ್ ಅದಕ್ಕಿಂತಲೂ ಹೆಚ್ಚಾಗಿ ಕೆಲಸ ಮಾಡುತ್ತದೆ.

## ಧ್ಯಾನ ಅಭ್ಯಾಸವೇ ನಿಜವಾದ ಅಕ್ಷರಾಭ್ಯಾಸವು

ಆತ್ಮವಿದ್ಯೆಯನ್ನು ಹೊಂದಿ ಆತ್ಮಾನುಭವ ಪಡೆದವರೆ, ಅನೇಕಾನೇಕ ಲೋಕ ವಿದ್ಯೆಗಳನ್ನು ಅತಿ ಸುಲಭವಾಗಿ ವಶ ಮಾಡಿಕೊಳ್ಳಬಲ್ಲರು. ಕಲಿತ ವಿದ್ಯೆಯನ್ನು ತಮ್ಮ ಪ್ರೌಢಾವಸ್ಥೆಯಲ್ಲಿ, ವೃದ್ಧಾಪ್ಯದಲ್ಲಿ ಲೋಕಕಲ್ಯಾಣಕ್ಕಾಗಿ ಉಪಯೋಗಿಸಬಹುದು. ಅದಕ್ಕಾಗಿ ಬಾಲ್ಯಾವಸ್ಥೆಯಲ್ಲಿಯೇ ಅವರಿಗೆ, ಧ್ಯಾನಾಭ್ಯಾಸವನ್ನು ಮಾಡಿಸಬೇಕು. ಅವರ ಧ್ಯಾನಾನುಭವಗಳನ್ನು ಶ್ರದ್ಧೆಯಿಂದ ಗ್ರಹಿಸಬೇಕು.

ಮಕ್ಕಳನ್ನು ನಿರ್ಭಯರನ್ನಾಗಿ, ಸರ್ವ ವಿದ್ಯಾಪಾರಂಗತರನ್ನಾಗಿ, ಸಕಲ ಕಲಾವಿದರನ್ನಾಗಿ ಮಾಡುವ ಉದ್ದೇಶದಿಂದ, ಪ್ರಾಚೀನ ಕಾಲದಲ್ಲಿ ಗುರುಕುಲಗಳಲ್ಲಿ ''ಧ್ಯಾನ, ಆತ್ಮಜ್ಞಾನ, ಕರ್ಮಶಾಸ್ತ್ರ ವಿಜ್ಞಾನ, ಗುರುಸೇವೆ'' ಎನ್ನುವ ವಿಷಯಗಳಿಗೆ ಪ್ರಥಮ ಸ್ಥಾನವನ್ನು ಕೊಡಲಾಗಿತ್ತು. ಈಗಿನ ಶಾಲೆಗಳಲ್ಲಿಯೂ ಅವೆಲ್ಲವೂ ಮತ್ತೆ ಮೊದಲನೆಯ ಸ್ಥಾನವನ್ನು ಪಡೆಯಬೇಕು.

ಮಕ್ಕಳಲ್ಲಿ ಸ್ಪರ್ಧಾತ್ಮಕ ಭಾವನೆಯ ಜೊತೆ ಸ್ಪರ್ಧೆ ಇಲ್ಲದ ಭಾವನೆಯನ್ನೂ ಸರಿಸಮಾನವಾಗಿ ಬೆಳೆಸಬೇಕು. ಇದಕ್ಕಾಗಿ ಮಕ್ಕಳನ್ನು ಆಗಾಗ ಏಕಾಂತದಲ್ಲಿ ಬಿಟ್ಟು ಮುಂಬರುವ ''ಪ್ರಪಂಚದ ಏಕತೆಗೆ'' ಚಿಕ್ಕಂದಿನಿಂದಲೆ, ಅಡಿಪಾಯ ಹಾಕಬೇಕು. ನಿಶ್ಚಿತ ಸಮಯಗಳಲ್ಲಿ ಮಕ್ಕಳಿಗೆ ಮೌನ ಹಾಗೂ ಧ್ಯಾನವನ್ನು ತಪ್ಪದೆ ನಿರ್ದೇಶಿಸಬೇಕು.

'' ಕ್ಷರ'' ಗೊಳ್ಳದಂತ ಆತ್ಮದ ಕುರಿತು ಜ್ಞಾನವನ್ನು ಎಲ್ಲರಿಗೂ ಹಂಚುತ್ತಾ ನಿಜವಾದ ''ಅಕ್ಷರಾಭ್ಯಾಸಕ್ಕಾಗಿ'' ಕಂಕಣ ತೊಟ್ಟಿರುವ ಜಗದ್ಗುರು ಹಾಗೂ ಮಕ್ಕಳ ಬಾಯಲ್ಲಿ ಪ್ರೇಮದಿಂದ '' ಪತ್ರೀ ಸಾರ್ '' ಎಂದು ಕರೆಸಿಕೊಳ್ಳುವ ಬ್ರಹ್ಮರ್ಷಿ ಪತ್ರೀಜಿ, ಇದಕ್ಕಾಗಿ ಪಣತೊಟ್ಟು ಕೆಲಸ ಮಾಡುತ್ತಿದ್ದಾರೆ.

ಮೂಲ : ಧ್ಯಾನಾಂಧ್ರಪ್ರದೇಶ್

-ಕನ್ನಡಕ್ಕೆ : ನಿರ್ಮಲ ಶ್ರೀನಿವಾಸ್, ಬೆಂಗಳೂರು



### ಪತ್ರೀಜಿ ಕ್ಯಾಲೆಂಡರ್ - ಸೆಪ್ಟೆಂಬರ್ 2009

| | | |
|---|---|---|
| ಸೆಪ್ಟೆಂಬರ್ 1 | : | ಗೌರಿಬಿದನೂರು/ಬೆಂಗಳೂರು |
| ಸೆಪ್ಟೆಂಬರ್ 2-3 | : | ಬೆಂಗಳೂರು |
| ಸೆಪ್ಟೆಂಬರ್ 4 | : | ಹೈದರಾಬಾದ್ |
| ಸೆಪ್ಟೆಂಬರ್ 5-6 | : | ಸಿಂಗಾಪುರ್ |
| ಸೆಪ್ಟೆಂಬರ್ 7-9 | : | ಮಲೇಷಿಯಾ |
| ಸೆಪ್ಟೆಂಬರ್ 10-12 | : | ನ್ಯೂಜಿಲ್ಯಾಂಡ್ |
| ಸೆಪ್ಟೆಂಬರ್ 13-16 | : | ಫಿಜಿ ಐಲ್ಯಾಂಡ್ |
| ಸೆಪ್ಟೆಂಬರ್ 17-22 | : | ನ್ಯೂಜಿಲ್ಯಾಂಡ್ |
| ಸೆಪ್ಟೆಂಬರ್ 25-31 | : | ಹೈದರಾಬಾದ್ |




## ಸ್ಟಾರ್ ಸೈನ್ಸ್ (Star Signs)

**ಲಿಂಡಾ ಗುಡ್‌ಮನ್**

**ಪ್ರಕಾಶಕರು: ಮ್ಯಾಕ್‌ಮಿಲನ್ ಲಂಡನ್ ಲಿಮಿಟೆಡ್, ಗ್ರೇಟ್ ಬ್ರಿಟನ್**




"ಸಾಮಾನ್ಯವಾಗಿ, ಭೌತಿಕಾತೀತ ವಿಷಯಗಳ ಕುರಿತು ಓದುವುದು ಅತ್ಯವಶ್ಯಕವಾಗಿದೆ. ನಮ್ಮ ಜನ್ಮ ಅವತಾರದಿಂದ ನಾವು ಸ್ವತಃ ವೈಯಕ್ತಿಕ ಸ್ವಾಂತ್ರ್ಯವನ್ನು ಪಡೆಯಲು ಇದು ಸಿದ್ಧತಾ ಕಾರ್ಯವಾಗಿದೆ." ಏರಿಸ್ ಥಾಮಸ್ ಜೆಫರ್‌ಸನ್ ರವರು ಹೀಗೆ ಹೇಳುತ್ತಾರೆ: "ಪುಸ್ತಕಗಳು ಇಲ್ಲದೆ ನಾನು ಬದುಕಿರುವುದು ಸಾಧ್ಯವಿಲ್ಲ" ಅವುಗಳು ಇಲ್ಲದೆಯೇ ಕೆಲವರು ಜ್ಞಾನವನ್ನು ಪಡೆದಿದ್ದಾರೆ! ಆದರೆ, ಖಂಡಿತವಾಗಿಯೂ ಪುಸ್ತಕಗಳೇ ಜ್ಞಾನೋದಯ ಪಡೆಯಲು ಸುಲಭವಾದ ಒಳಹಾದಿ, ಅಂದರೆ, ಶಾರ್ಟ್‌ಕಟ್ ಆಗಿದೆ.

"ಪರಮಾತ್ಮನಿಂದ ಮಾರ್ಗದರ್ಶನ ಪಡೆಯಬೇಕು ಎಂಬ ದೃಢನಿಶ್ಚಯದಿಂದ, ನೀವು ಪುಸ್ತಕಗಳನ್ನು ಓದುತ್ತೇನೆ ಎಂಬ ಪ್ರಾಮಾಣಿಕವಾದ ಬಯಕೆಯನ್ನು ವ್ಯಕ್ತಪಡಿಸಿದರೆ, ವಿಶ್ವಾತ್ಮಕ ನಿಯಮದ ಅನ್ವಯ, ನಿಮ್ಮ ವೈಯಕ್ತಿಕ ಗುರುವು ನಿಮಗೆ ಸಾಕ್ರೆಟೀಸ್‌ನ ವಿಧಾನದಲ್ಲಿ ಬೋಧಿಸಲು ಸನ್ನದ್ಧನಾಗುತ್ತಾನೆ. ಈ ಬೋಧನಾ ವಿಧಾನವು ವಿಶಿಷ್ಟವಾಗಿರುತ್ತದೆ. ಅದೇನೆಂದರೆ, ನಿಮಗೆ ಈಗಾಗಲೇ ತಿಳಿದಿರುವ, ಆದರೆ, ನೀವು ಮರೆತಿರುವ ವಿಷಯಗಳನ್ನೇ ನಿಮಗೆ ನೆನಪಿಸಿಕೊಡುವ ಬೋಧನಾ ವಿಧಾನವಾಗಿರುತ್ತದೆ. ಸಾಕ್ರೆಟಿಸ್‌ನ ವಿಧಾನ ಎಂದರೆ, ಗುರುವು ವಿದ್ಯಾರ್ಥಿಗಳಿಗೆ ಏನನ್ನಾದರೂ ಹೇಳುವುದರ ಬದಲಾಗಿ, ಮೂಲತಃ ವಿದ್ಯಾರ್ಥಿಗೇ ಪ್ರಶ್ನೆಗಳನ್ನು ಕೇಳುವುದಾಗಿದೆ. ಕೇವಲ ಹೇಳಿಕೆಗಳನ್ನು ನೀಡುವುದರ ಬದಲಾಗಿ, ಹೀಗೆ ಪ್ರಶ್ನೆಗಳನ್ನು ಕೇಳಿದಾಗ, ಉತ್ತರವನ್ನು ಹುಡುಕಾಡಲು ನಮ್ಮ ಮನಸ್ಸು ಕಂಪ್ಯೂಟರಿನ ರೀತಿಯಲ್ಲಿ ಮಿದುಳಿನಲ್ಲಿರುವ ಮೆಮೊರಿ ಬ್ಯಾಂಕ್ ಎಂಬ ನೆನಪಿನ ದಾಖಲೆಗಳನ್ನು ಸ್ಕ್ಯಾನ್ ಮಾಡುತ್ತದೆ. ಈ ಜೀವಿತ ಕಾಲಾವಧಿಯ ನೆನಪುಗಳನ್ನು ಅಷ್ಟೇ ಅಲ್ಲದೆ, ಹಳೆಯ, ಹಿಂದಿನ ಜೀವಿತ ಕಾಲಾವಧಿಗಳ ನೆನಪುಗಳೂ ಸಹ ಇಂತಹ ಸ್ಕ್ಯಾನ್‌ಗೆ ಒಳಗಾಗುತ್ತವೆ. ನಿಮಗೆ ಉತ್ತರವು ತಿಳಿದಿರುವ ಬಗ್ಗೆ ನಿಮಗೇ ಅರಿವಿಲ್ಲದ ರೀತಿಯಲ್ಲಿ, ಸಾಮಾನ್ಯವಾಗಿ ಅಲ್ಲಿಂದ ಉತ್ತರಗಳು ಹೊರಬರುತ್ತವೆ. ನೀವು ತಿಳಿಯಬೇಕು ಎಂದಿರುವುದು ಎಲ್ಲವೂ ಸಹ ನಿಮಗೆ ತಿಳಿದಿರುತ್ತದೆ, ಅದು, ಆಕಾಶಿಕ್ ರೆಕಾರ್ಡ್ ಎಂದು ಕರೆಯಲಾಗುವ ಅಳಿಸಲಾಗದ ದಾಖಲೆಯಾಗಿ, ಶಾಶ್ವತವಾಗಿ ದಾಖಲಾಗಿರುತ್ತದೆ. ಎಡ್ಗರ್ ಕೇಸಿ ಎಂಬುವವನು ಆಶ್ಚರ್ಯಕರ ರೀತಿಯಲ್ಲಿ ಅವುಗಳನ್ನು ಓದಿ ಹೇಳಿದ ರೀತಿಯಲ್ಲಿ ನೀವೂ ಸಹ ಆಕಾಶಿಕ್ ರೆಕಾರ್ಡ್‌ಗಳನ್ನು ಓದಬಹುದು. ಅಂತಹ ಸಾಮರ್ಥ್ಯ ನಿಮಗೆ ಇದೆ ಎಂಬುದನ್ನು ನೀವು ಈಗ ಮರೆತಿದ್ದೀರಿ ಅಷ್ಟೇ!"

## ದಿ ಸೆಲೆಸ್ಟೈನ್ ಪ್ರಾಫೆಸಿ

**ಜೇಮ್ಸ್ ರೆಡ್‌ಫೀಲ್ಡ್**

**ಪ್ರಕಾಶಕರು: ಬ್ಯಾನ್‌ಟಂ ಎಡಿಷನ್, ಗ್ರೇಟ್ ಬ್ರಿಟನ್**




"ಹೌದು, ನಿಮಗೆ ಆಧ್ಯಾತ್ಮಿಕತೆಯು ಒಂದು ಪ್ರಶ್ನೆಯೇ. ಸ್ವಯಂ ಉನ್ನತಿಯನ್ನು ನೀಡುವ ಮಾರ್ಗವನ್ನು ಕಂಡುಹಿಡಿಯುವುದರಲ್ಲಿಯೇ ಇಡೀ ಜೀವನ ಕಳೆದುಹೋಗುತ್ತದೆ. ಇಂತಹ ಮಾರ್ಗ ಅನ್ವೇಷಿಸುವಲ್ಲಿ ವಿಫಲರಾದ ನಿಮ್ಮ ಪೋಷಕರೂ, ಈ ಸಮಸ್ಯೆಯನ್ನು ನಮಗೂ ಸಹ ವರ್ಗಾಯಿಸಿದ್ದಾರೆ. ಇದೊಂದು ನಿಮ್ಮ ವಿಕಾಸದ ಕುರಿತಾಗಿರುವ, ಜೀವಿತ ಕಾಲಾವಧಿಯ ಉದ್ದಕ್ಕೂ ನಡೆದಿರುವ ಅನ್ವೇಷಣೆಯೇ ಆಗಿದೆ.

**–ಕನ್ನಡಕ್ಕೆ : ಎ. ಸತ್ಯನಾರಾಯಣ**

# ಕೂಡ್ಲಗಿಯಲ್ಲಿ ಶ್ರೀ ಆತ್ಮ ಸಾಯಿ ಪಿರಮಿಡ್ ಶಂಕು ಸ್ಥಾಪನೆ

ದಿನಾಂಕ : 08-08-09ನೇ ಶನಿವಾರ ಬೆಳಿಗ್ಗೆ 8:30ಕ್ಕೆ ಕೂಡ್ಲಿಗಿ ನಗರದ ಈಶಾನ್ಯ ದಿಕ್ಕಿನಲ್ಲಿ ಶ್ರೀ ಮರಿಯಮ್ಮ ದೇವಸ್ಥಾನದ ಆವರಣದಲ್ಲಿ 30'X30' ವ್ಯಾಪ್ತಿಯ "ಶ್ರೀ ಆತ್ಮ ಸಾಯಿ ಪಿರಮಿಡ್" ಕಟ್ಟಡಕ್ಕೆ ಶಂಕುಸ್ಥಾಪನೆಯನ್ನು ನೆರವೇರಿಸಲಾಯಿತು.

ಈ ದಿನವನ್ನು ಕೂಡ್ಲಿಗಿ ಜನತೆ ಎಂದೆಂದಿಗೂ ಮರೆಯಲಾಗದ ಸುವರ್ಣ ದಿನವೆಂದರೆ ಅತಿಶಯೋಕ್ತಿಯಾಗಲಾರದು. ಈ ಘಳಿಗೆಯು ವರ್ಣಿಸಲು ಅಸಾಧ್ಯವಾದಂತ ಸಂಭ್ರಮ, ಸಡಗರದಿಂದ ಕೂಡಿತ್ತು.

ಈ "ಆತ್ಮ ಸಾಯಿ ಪಿರಮಿಡ್" ದೇಗುಲದ ಶಂಕುಸ್ಥಾಪನೆಯ ಅಧ್ಯಕ್ಷತೆಯನ್ನು ಕೂಡ್ಲಿಗಿ ಪಟ್ಟಣದ ಜನಪ್ರಿಯ ಶಾಸಕರಾದ ಶ್ರೀ ನಾಗೇಂದ್ರರವರು ವಹಿಸಿಕೊಂಡಿದ್ದರು, ಮುಖ್ಯ ಅತಿಥಿಗಳಾಗಿ ಧ್ಯಾನ ಚಿಂತಾಮಣಿ, ಕೂಡ್ಲಿಗಿಯ ಸೌಭಾಗ್ಯವೆಂದೇ ಬಿಂಬಿಸಲಾಗಿರುವ ಈ ಆತ್ಮ ಸಾಯಿ ಪಿರಮಿಡ್‌ನ ಮೂಲ ಕರ್ತೃ ಶ್ರೀ ಹನುಮಂತಪ್ಪ ವೈ. ತುರಾಯಿ ಹಾಗೂ ಅವರ ಧರ್ಮ ಪತ್ನಿ ಶ್ರೀಮತಿ ವರಲಕ್ಷ್ಮಿ ಇವರು ಮುಖ್ಯ ಅತಿಥಿ ಸ್ಥಾನ ಅಲಂಕರಿಸಿದ್ದರು. ಅತಿಥಿಗಳಾಗಿ ಬೆಂಗಳೂರಿನಿಂದ ಸೀನಿಯರ್ ಪಿರಮಿಡ್ ಮಾಸ್ಟರ್ ಶ್ರೀ ಶಿವರಾಮಪ್ಪ, ಬಳ್ಳಾರಿ ಜಿಲ್ಲೆಯ ಅಡಿಷನಲ್ ಎಸ್.ಪಿ, ಶ್ರೀ ಅಶೋಕ, ಕುಬೇರ ಹಾಗೂ ಧ್ಯಾನ ಪ್ರಚಾರಕರು ಆಗಮಿಸಿದ್ದರು. ಈ ಕಾರ್ಯಕ್ರಮದ ನಿರೂಪಣೆಯನ್ನು ತುಂಬಾ ಸೊಗಸಾಗಿಯೂ, ಯಶಸ್ವಿಯಾಗಿಯೂ ಶ್ರೀ ವಿರೂಪಾಕ್ಷಪ್ಪ ಶಿಕ್ಷಕರು ನೆರವೇರಿಸಿ ಕೊಟ್ಟರು.

ಕೂಡ್ಲಿಗಿ ಪಟ್ಟಣದ ಜನತೆ, ಶ್ರೀ ಸಾಯಿ ಭಜನಾ





ಸಮಿತಿಯವರು, ವಿದ್ಯಾರ್ಥಿಗಳು, ಹಿರಿಯರು-ಕಿರಿಯರು. ಅಕ್ಕ ಪಕ್ಕದ ಗ್ರಾಮದ ಜನತೆ ತಮ್ಮ ಹೊಲ ಗದ್ದೆಗಳ ಕೆಲಸವನ್ನು ಬದಿಗೊತ್ತಿ ಬಂದು ತುಂಬ ಉತ್ಸುಕತೆಯಿಂದ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಯಶಸ್ವಿಗೊಳಿಸಿದರು. ಅಲ್ಲದೇ ಖಾನಾಹೊಸಳ್ಳಿ, ದಾವಣಗೆರೆ, ಬಳ್ಳಾರಿ ಇತ್ಯಾದಿ ಬೇರೆ ಬೇರೆ ಸ್ಥಳಗಳಿಂದಲೂ 2000 ಜನರು ಆಗಮಿಸಿದ್ದರು.

ಅಸಂಖ್ಯಾತ ಜನಸಾಗರದಿಂದ ಕೂಡಿದ ಈ ಸ್ಥಳ ನೋಡಲು ಬಲು ಸೊಗಸಾಗಿಯೂ, ಆನಂದಕರವಾಗಿಯೂ, ಅಷ್ಟೇ ಆಶ್ಚರ್ಯಕರವಾಗಿಯೂ ಕಂಡಿತು. ಈ ಸಂಭ್ರಮ, ಸಡಗರ ಕಣ್ಣಿಗೆ ಹಬ್ಬವೇ ಸರಿ.

ತುಂಬ ಉತ್ಸುಕರಾಗಿ ನಿರೀಕ್ಷಿಸುತ್ತಿದ್ದ ಜನತೆಗೆ ಬೇರೆಡೆಯಿಂದ ಬಂದಂತಹ ಧ್ಯಾನಿಗಳು, ಕೂಡ್ಲಿಗಿ ನಗರದ ಧ್ಯಾನಿಗಳು ಧ್ಯಾನದ ಬಗ್ಗೆ ಅರ್ಥಪೂರ್ಣವಾಗಿ ಧ್ಯಾನದ ಮಹಿಮೆಯನ್ನು ತಿಳಿಸಿದರು ಹಾಗೂ ಪ್ರಾಯೋಗಿಕವಾಗಿ ಅಲ್ಲಿಯೇ 20 ನಿಮಿಷಗಳ ಕಾಲ ಧ್ಯಾನವನ್ನು ಮಾಡಲಾಯಿತು. ಧ್ಯಾನದ ಬಗ್ಗೆ ಮನವರಿಕೆಗೊಂಡ ಜನತೆ, ಧ್ಯಾನಿಗಳು ತಿಳಿಸಿದಂತೆ, ಚಾಚೂ ತಪ್ಪದೇ ಧ್ಯಾನ ಮಾಡಿದರು ಮತ್ತು ಧ್ಯಾನದಲ್ಲಿ ತಲ್ಲೀನರಾಗಿದ್ದವರು ತಮಗಾದ ಹೊಸ ಅನುಭವ, ಆನಂದದ ಬಗ್ಗೆ ತಿಳಿಸಿದರು.

ಶಂಕುಸ್ಥಾಪನೆಗೆಂದು ಆಗಮಿಸಿದ ಎಲ್ಲರನ್ನು ಆಶ್ಚರ್ಯಚಕಿತಗೊಳಿಸಿದ ಸಂಗತಿ ಎಂದರೆ, ಕೇವಲ ಶಂಕುಸ್ಥಾಪನೆಗೆ ಇಷ್ಟೊಂದು ಜನಸಾಗರ ನೆರೆದಿದೆ ಎಂದ ಮೇಲೆ ಇನ್ನು ಪಿರಮಿಡ್ ಧ್ಯಾನ ಮಂದಿರದ ಪ್ರಾರಂಭೋತ್ಸವವನ್ನು ಇನ್ನೂ ಎಷ್ಟು

ಸಂಭ್ರಮದಿಂದ ಆಚರಿಸಬಹುದೋ ಎಂದು ಹುಬ್ಬೇರಿಸುವಂತೆ ಮಾಡಿತ್ತು. ಅದು ಊಹಿಸಲು ಅಸಾಧ್ಯವೆಂದು ಜನ ನಿಬ್ಬೆರಗಾದರು.

ಮಾನ್ಯ ಅಧ್ಯಕ್ಷರು, ಅತಿಥಿಗಳೆಲ್ಲರೂ ತಮ್ಮ ಹಿತನುಡಿಗಳಿಂದ, ಅನುಭವಗಳಿಂದ ಧ್ಯಾನದ ಕುರಿತು ಅಮೋಘ ವಿವರಣೆಗಳನ್ನು ನೀಡುತ್ತಾ ಜನರಿಗೆ ಸರಳವಾಗಿ ಮನಮುಟ್ಟುವಂತೆ ಅರ್ಥೈಸಿದರು.

ಮುಖ್ಯ ಅತಿಥಿಗಳಾದ ಶ್ರೀ ಹೆಚ್. ವೈ ತುರಾಯಿ (DYSP) ಇವರನ್ನು ಹಿಂದೆ ಕಂಡವರು ಈಗ ಧ್ಯಾನದಿಂದ ಅವರಲ್ಲಾದ ಬೃಹತ್ ಪರಿವರ್ತನೆಯನ್ನು ಕಂಡು, ಇವರೊಬ್ಬ ಕಲಿಯುಗದ ವಾಲ್ಮೀಕಿಯೇ ಸರಿ ಎಂದೂ, ಇವರೇ ನಮಗೆಲ್ಲಾ ಸರಿಯಾದ ಹಾಗೂ ಪ್ರತ್ಯೇಕವಾದ ನಿದರ್ಶನವೆಂದೂ, ಧ್ಯಾನದಿಂದ ಎಷ್ಟೊಂದು ಸಾಧನೆ, ಪರಿವರ್ತನೆಗೆ ಶಕ್ತಿ ಇದೆ ಎಂದು ಅರಿತ ಜನತೆ, ತಮ್ಮ ತಮ್ಮ ಊರುಗಳಲ್ಲಿ ಪಿರಮಿಡ್ ನಿರ್ಮಿಸಿಕೊಂಡು, ಪ್ರತಿದಿನ ಧ್ಯಾನ ಮಾಡಿ ಅದ್ಭುತ ಶಕ್ತಿ ಪಡೆಯುತ್ತೇವೆ, ಬ್ರಹ್ಮಾಂಡದ ಸತ್ಯವನ್ನು ತಿಳಿಯುತ್ತೇವೆ, ನಾವೂ ಧ್ಯಾನಿಗಳಾಗುತ್ತೇವೆ ಹಾಗೂ ಧ್ಯಾನದ ಪ್ರಚಾರ ಮಾಡುತ್ತೇವೆ ಎಂದು ಸಂತೋಷಭರಿತರಾಗಿ ಒಕ್ಕೊರಲಿನಿಂದ ನುಡಿದರು.

ಇದೆಲ್ಲವೂ "ಶ್ರೀ ಆತ್ಮ ಸಾಯಿ ಪಿರಮಿಡ್ ಧ್ಯಾನ ಮಂದಿರ" ದ ಶಂಕುಸ್ಥಾಪನೆಯ ವೇಳೆ ನಡೆದಂತಹ ಸಂಭ್ರಮ.

ಈ ಸಂಭ್ರಮವು ಕೂಡ್ಲಿಗಿ ಜನತೆಗೆ ಎಂದೆಂದೂ ಮರೆಯಲಾರದಂತಹ ಸವಿನೆನಪಾಗಿ ಉಳಿದಿದೆ.

-ವಿ. ಕೃಷ್ಣವೇಣಿ(VKGS)ಸದಸ್ಯರು

## ಧ್ಯಾನದಿಂದ ಜ್ಞಾನ, ಜ್ಞಾನದಿಂದ ಮುಕ್ತಿ

# ಭಾವನೆ ಮತ್ತು ಮನೋವರ್ಗ

ವಾಹನ ಚಾಲನೆಯನ್ನು ಕಲಿತು ಮೊದಲಬಾರಿಗೆ ನಗರದಲ್ಲಿ ವಾಹನ ಚಲಾಯಿಸುವ ವ್ಯಕ್ತಿಯ ಮನೋಸ್ಥಿತಿ ಏನು? ಆತನ ಮನಸ್ಸು ಯಾವ ವರ್ಗಕ್ಕೆ ಸೇರುತ್ತದೆ ಎಂಬುದು ಅವರ ಭಾವನೆಗಳನ್ನು ಅವಲಂಬಿಸಿದೆ. ಅವರ ಅಭಿಪ್ರಾಯಗಳನ್ನು ಅನುಸರಿಸಿ ಅವರ ಮನೋವರ್ಗವನ್ನು ನಿರ್ಧರಿಸಬಹುದು.

1.ವಿನಾಶಕಾರಿ ಮನಸ್ಸು: ''ನಾನು ನಗರದಲ್ಲಿ ಮೊದಲ ಬಾರಿಗೆ ವಾಹನ ಚಲಾಯಿಸುತ್ತಿರುವುದರಿಂದ ಅಪಘಾತ ಸಂಭವಿಸುತ್ತದೆ''

2.ಋಣಾತ್ಮಕ ಮನಸ್ಸು: ''ನಾನು ನಗರದಲ್ಲಿ ಮೊದಲ ಬಾರಿಗೆ ವಾಹನ ಚಲಾಯಿಸುತ್ತಿದ್ದೇನೆ. ಏನಾಗುತ್ತದೆಯೋ ನನಗೆ ಗೊತ್ತಿಲ್ಲ!.. ಅಪಘಾತ ಆದರೂ ಆಗಬಹುದು.. ಆಗದೆಯೂ ಇರಬಹುದು.. ನನಗೆ ಗೊತ್ತಿಲ್ಲ''.

3.ಧನಾತ್ಮಕ ಮನಸ್ಸು: ''ನಗರದಲ್ಲಿ ನಾನು ವಾಹನ ಚಲಾಯಿಸುತ್ತಿರುವುದು ಇದು ಮೊದಲ ಬಾರಿಯಾದರೂ ಸಹ, ಎಲ್ಲವೂ ಸಹ ಸಮರ್ಪಕವಾಗಿಯೇ ಇರುತ್ತದೆ. ಎಲ್ಲಿಯೂ, ಏನೂ ಆಗುವುದಿಲ್ಲ!''

4.ಅದ್ಭುತ ಮನಸ್ಸು: ''ನಾನು ನಗರದಲ್ಲಿ ಮೊದಲ ಬಾರಿಗೆ ವಾಹನ ಚಲಾಯಿಸುತ್ತಿದ್ದೇನೆ. ಇನ್ನು ಇಪ್ಪತ್ತು ನಿಮಿಷಗಳಲ್ಲಿ ನಾನು ನನ್ನ ಗುರಿಯನ್ನು ಮುಟ್ಟಿ ಹಿಂದಿರುಗಿ ಬರುತ್ತೇನೆ''.

ಧ್ಯಾನಾನುಭವ

# "ನನ್ನೊಳಗಿರುವ ಗುರು ಅಥವಾ ನಾನು ಯಾರು"

'ಧ್ಯಾನ' ಎಂದರೇನು, ಅದು ಹೇಗೆ ಮಾಡಬೇಕು. ಅದರಿಂದ ಏನೇನು ಉಪಯೋಗ ಎಂಬುದನ್ನು ತಿಳಿಯಲು ದಾರಿ ತೋರಿದವರು ಮಾವ, ಪ್ರೀತಿಯ ಮುಖ್ಯಗುರುಗಳು ಪಂಪಣ್ಣ ಸರ್‌ರವರು. ನಾನು ದಾರಿಯಲ್ಲಿ ಹೊರಟಿದ್ದೆ ಕರೆದು, ಇಂದು ಒಬ್ಬ ವಿಶೇಷ ವ್ಯಕ್ತಿ ಸಿರಗುಪ್ಪಗೆ ಬರುತ್ತಿದ್ದಾರೆ ಬಾ ಎಂದು ಕರೆತಂದು ಈ ಧ್ಯಾನ ಕಲ್ಪನೆಯ ಬೀಜ ಬಿತ್ತಿದ ಗುರು ಅವರೇ.

ಆ ದಿನ ಅರ್ಧಗಂಟೆ ಧ್ಯಾನ ಮಾಡಿದ್ದೆ, ನನಗೆ ಹೊಸದೊಂದು ಆನಂದ, ಚೇತನ, ಉತ್ಸಾಹ, ಕಣ್ಣುಗಳಿಗೆ ತಂಪು ಒದಗಿ ಬಂತು. ನನ್ನ ಜೀವನದಲ್ಲಿ ಅನೇಕ ಕಷ್ಟ ದುಃಖ ದುರಾಸೆಗಳನ್ನು ಅನುಭವಿಸಿ, ಅಲ್ಪ ಸುಖಗಳನ್ನು ಅತ್ಯಂತ ಸಂತೋಷದಿಂದ ಅನುಭವಿಸಿದ್ದೇನೆ. ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದಾಗ ವಿಸ್ಮಯನಾಗಿದ್ದೇನೆ.

ಸುಂದರ ಜೀವನವನ್ನು ಅನುಭವಿಸಲು ಪ್ರಯತ್ನಿಸುತ್ತಿದ್ದೇನೆ. ಆದರೆ, ಜೀವನ ಎಂದರೇನು ? ಅದು ಹೇಗಿರಬೇಕು ? ಅದು ಆಯ್ಕೆ ಮಾಡಿಕೊಂಡಿದ್ದು ಯಾರು ? ನಾವು ಏಕೆ ಈ ನರಕ ಜೀವನಕ್ಕೆ ಮರಳಿ ಮರಳಿ ಬರುತ್ತಿದ್ದೇವೆ ಎಂಬುದರ ಬಗ್ಗೆ ಶ್ರೀ ಭೀಮೇಶ್ವರರೆಡ್ಡಿಯವರ ''**ಸುಮಧುರವೀ ಜೀವನ**'' ಎಂಬ ಪಾಠ ಕೇಳಿದ ನಂತರವೇ ಗೊತ್ತಾಗಿದ್ದು, ಅಂದಿನಿಂದ ಇಂದಿನವರೆಗೂ ನಾನು ತಪ್ಪದೇ ಧ್ಯಾನ ಮಾಡುತ್ತಿದ್ದೇನೆ. ಮಾಡಲು ತಿಳಿಸುತ್ತಿದ್ದೇನೆ.

ನಾನು ಬಿ.ಆರ್.ಪಿ. ಆದ ನಂತರ ಪ್ರತಿ ಶಿಕ್ಷಕ ಮಿತ್ರರಿಗೆ ತರಬೇತಿ ಕೇಂದ್ರದಲ್ಲಿ ಧ್ಯಾನ ಮಾಡಿಸಿ, ಧ್ಯಾನದ ಮಹತ್ವವನ್ನು ತಿಳಿಸುತ್ತಿದ್ದೇನೆ. ಅನೇಕ ಮಾಸ್ಟರ್‌ಗಳಿಂದ (ಭೀಮೇಶ್‌ರೆಡ್ಡಿ, ಶ್ರೀನಿವಾಸ್, ಸುಮಂಗಳಮ್ಮ) ಶಿಕ್ಷಕರುಗಳಿಗೆ, ಮಕ್ಕಳಿಗೆ ಧ್ಯಾನದ ಬಗ್ಗೆ ತರಗತಿಗಳನ್ನು ನಡೆಸಿಕೊಟ್ಟಿದ್ದೇವೆ.

**2009-10 ರ ನಲಿ-ಕಲಿ ತರಬೇತಿ ಸಮಯದಲ್ಲಿ ತಾಳೂರು**



ಮತ್ತು ದರೂರು ಕ್ಲಸ್ಟರಿನ ಶಿಕ್ಷಕರುಗಳು ಆದಿನದ ತರಬೇತಿಯಲ್ಲಿ ಬೆಳಗ್ಗೆ ಅರ್ಧಗಂಟೆ ಧ್ಯಾನಕ್ಕೆ ಕುಳಿತ ಒಂದು ಭಾವ ಚಿತ್ರವನ್ನು 'ಧ್ಯಾನ ಕಸ್ತೂರಿ'ಗೆ ಕಳಿಸಬೇಕೆಂದು ಕಳಿಸುತ್ತಿದ್ದೇನೆ.

ಪ್ರತಿಶಿಕ್ಷಕರು ಧ್ಯಾನಿಗಳಾಗಬೇಕು. ಧ್ಯಾನದ ಸಂಪೂರ್ಣ ಮಾಹಿತಿಯನ್ನು ಅನುಕೂಲಗಳನ್ನು ಪಡೆದು, ಬೆಳೆಯುವ ಸಸಿಗಳನ್ನು ಪ್ರಾರಂಭದಲ್ಲಿ ಉತ್ತಮ ರೀತಿಯಲ್ಲಿ ಬೆಳೆಯಲು ಮಕ್ಕಳಿಗೆ ಧ್ಯಾನವನ್ನು ಕಲಿಸಿ 'ಧ್ಯಾನ ಜಗತ್ತಿಗೆ' ತಮ್ಮ ಕಿರುಕಾಣಿಕೆಯನ್ನು ಸಲ್ಲಿಸುತ್ತಾರೆಂದು ನನ್ನ ನಂಬಿಕೆ.

ನಾನು ಪ್ರತಿ ಶಾಲೆಗೆ ಹೋದಾಗಲು ಸಹ ಶಿಕ್ಷಕರ ಬೋಧನಾ ಕೌಶಲ್ಯ ಮತ್ತು ಶೈಕ್ಷಣಿಕ ಪ್ರಗತಿಯನ್ನು ನೋಡಿದ ನಂತರ, ಸಾಯಂಕಾಲ ಎಲ್ಲಾ ಮಕ್ಕಳಿಗೆ ಧ್ಯಾನಕ್ಕೆ ಕುಳಿತುಕೊಳ್ಳುವ ವಿಧಾನ, ಧ್ಯಾನ ಮಾಡುವ ರೀತಿಯನ್ನು ತಿಳಿಸಿಕೊಡುತ್ತೇನೆ.

-ವಿ. ಶಿವದಾಸ್ (ಬಿ.ಆರ್.ಪಿ.), ಸಿರುಗುಪ್ಪ

"ಪ್ರಕೃತಿಯಲ್ಲಿ ಎಲ್ಲವೂ ನೀವು ನಗುವುದನ್ನೇ ಕಾಯುತ್ತಿವೆ. ನೀವು ನಕ್ಕರೆ, ಇಡೀ ಪ್ರಕೃತಿ ನಿಮ್ಮೊಂದಿಗೆ ನಗುತ್ತದೆ. ಅದು ಮಾರ್ದನಿಸುತ್ತದೆ, ಅದೇ ಜೀವನದ ನಿಜವಾದ ಮೌಲ್ಯ. ಎಲ್ಲ ಸರಿಯಾಗಿರುವಾಗ ಎಲ್ಲರೂ ನಗಬಲ್ಲರು, ಆದರೆ ಎಲ್ಲವೂ ನಿಮ್ಮನ್ನು ಕಂಗೆಡಿಸುತ್ತಿರುವಾಗಲೂ ನೀವು ನಗಬಲ್ಲಿರಾದರೆ, ಅದೇ ವಿಕಾಸ, ಅದೇ ಪ್ರಗತಿ."

**-ಶ್ರೀ ಶ್ರೀ ರವಿಶಂಕರ್**





ಧ್ಯಾನಾನುಭವ

## ನನಗೆ ಸಾವಿನದಾಗಲಿ, ಸ್ವರ್ಗ-ನರಕಗಳದಾಗಲೀ ಯಾವುದಕ್ಕೂ ಭಯವೇ ಇಲ್ಲ



ನನ್ನ ಹೆಸರು ತುಳಸಿ ಕೃಷ್ಣ ಮೂರ್ತಿ. ನಾನು ಈ ಧ್ಯಾನಕ್ಕೆ ಬಂದು ಸುಮಾರು 6 ವರ್ಷಗಳಾದವು. ಈ ಧ್ಯಾನಕ್ಕೆ ಬರುವ ಮುಂಚೆ ನಾನು ಹಲವು ಧ್ಯಾನಗಳನ್ನು ಹುಡುಕಿಕೊಂಡು ಹೋಗುತಿದ್ದೆ. ನಾನು ಬ್ಯಾಂಕ್‌ನಲ್ಲಿ ಮ್ಯಾನೇಜರ್ ಆಗಿ ಕೆಲಸ ಮಾಡುತ್ತಿದ್ದೆ. ನಿವೃತ್ತಿಯಾದ ನಂತರ ಮನೆಯಲ್ಲಿ ಕುಳಿತು ವ್ಯಥಾ ಕಾಲ ಕಳೆಯುವುದು ಕಷ್ಟವಾಗುತ್ತಿತ್ತು. ಆದ್ದರಿಂದ, ಬೇರೆ ಬೇರೆ ಧ್ಯಾನವನ್ನು ಹುಡುಕಿಕೊಂಡು ಹೋಗುತ್ತಿದ್ದೆ. ಈ ಹಿಂದೆ 4 ವರ್ಷಗಳ ಕಾಲ ಬ್ರಹ್ಮ ಕುಮಾರಿಯಲ್ಲಿದ್ದೆ , ನಾಲ್ಕು ಸಲ ಮೌಂಟ್ ಅಬುಗೆ ಹೋಗಿ ಬಂದೆನು. ಅದಾದ ನಂತರ, ನನಗೆ 'ಆನಾಪಾನಸತಿ' ಧ್ಯಾನ ದೊರೆಯಿತು. ಈ ಧ್ಯಾನಕ್ಕೆ ಬಂದ ಮೊದಲ ದಿವಸವೇ ಶ್ರೀಮತಿ ಶ್ರೀದೇವಿಯವರ ಮನೆಯಲ್ಲಿ ಧ್ಯಾನ ಪ್ರಾರಂಭಿಸಿದೆ. ಆ ದಿವಸ ನನಗೆ ಪೂಜ್ಯ ಶ್ರೀ ರಾಮಕೃಷ್ಣರು ಮತ್ತು ಶಾರದಾ ದೇವಿಯರ ದರ್ಶನವಾಯಿತು. ಆಗಿನಿಂದಲೇ ನನಗೆ ಹೆಚ್ಚಿನದಾಗಿ ಧ್ಯಾನದಲ್ಲಿ ಉತ್ಸಾಹ ದೊರೆಯಿತು.

ನಾನು ಸುಮಾರು 91 ದಿವಸಗಳ ಕಾಲ ರಾತ್ರಿ ಪೂರಾ ನಿದ್ರೆ ಬಿಟ್ಟು ಧ್ಯಾನ ಮಾಡಿದೆ. ಹಗಲೂ ಧ್ಯಾನ ಮಾಡುತ್ತಿದ್ದೆ . ನಿದ್ರೆಯನ್ನು ಮಾಡುತ್ತಿರಲಿಲ್ಲ, ಆದರೂ, ನನಗೆ ಯಾವ ಆಯಾಸ ವಾಗಲೀ, ಖಾಯಿಲೆ ಯಾಗಲಿ ಬರುತ್ತಿರಲಿಲ್ಲ, ಆದರಿಂದ, ನಾನು ಇನ್ನೂ ಚೈತನ್ಯಯುಕ್ತವಾಗಿ ಇರಲು ಸಾಧ್ಯವಾಗುತ್ತಿತ್ತು. ನನಗೆ ಯಾವುದಾದರೂ ದುಃಖವಾಗಲೀ, ಯಾರಿಂದಲಾದರೂ ನೋವುಗಳಾಗಲಿ ಬಂದರೆ, ಶ್ರೀ ಶಾರದಾ ಮಾತೆಯವರು ಬಂದು ಸಾಂತ್ವನ ಹೇಳುತ್ತಾರೆ. ಈ ಧ್ಯಾನದ ಮಹತ್ವವನ್ನು ಬರವಣಿಗೆಯಿಂದಾಗಲಿ, ಸಂಭಾಷಣೆಯಿಂದಾಗಲಿ, ವರ್ಣಿಸಲು ಸಾಧ್ಯವಿಲ್ಲ ಎಂದು ಪುನಃ ಪುನಃ ಹೇಳುತ್ತಿದ್ದೇನೆ. ನಾನು ಈ ಧ್ಯಾನದಿಂದ ಎಲ್ಲಾ ಲೋಕಗಳನ್ನು ನೋಡಿಬರುತ್ತಿದ್ದೇನೆ. ಅವುಗಳ ವರ್ಣನೆಯನ್ನು ತಿಳಿಸುವುದಕ್ಕೆ ಸಾಧ್ಯವಿಲ್ಲ. ನನಗೆ ಈಗ ಸಾವಿಗಾಗಲಿ, ಸ್ವರ್ಗ-ನರಕಗಳಿಗಾಗಲೀ ಯಾವುದಕ್ಕೂ ಭಯವೇ ಇಲ್ಲ, ಎಲ್ಲಾ ಈ ಧ್ಯಾನವೇ ಕಲಿಸುತ್ತಿದೆ, ಕಾಣಿಸುತ್ತಿದೆ.

ಆದ್ದರಿಂದ, ಈ ಧ್ಯಾನವನ್ನು ಇಷ್ಟು ಸುಲಭವಾಗಿ ಪರಿಚಯಿಸಿರುವ ಶ್ರೀ ಗುರು ಪತ್ರೀಜಿಯವರಿಗೆ ಕೋಟಿ ವಂದನೆಗಳನ್ನು ಅರ್ಪಿಸುತ್ತಾ, ನನ್ನ ಧ್ಯಾನದ ಅನುಭವಗಳನ್ನು ಇಲ್ಲಿಗೆ ಮುಕ್ತಾಯ ಮಾಡುತ್ತಿದ್ದೇನೆ.

-ತುಳಸಿ ಕೃಷ್ಣಮೂರ್ತಿ

ಬೆಂಗಳೂರು

ಶುದ್ಧ ಚಾರಿತ್ರ್ಯವುಳ್ಳವನಾಗು, ಧೈರ್ಯವಂತನಾಗು. ಅಂತಃಕರಣ ಪೂರಿತನಾಗು, ಕಟ್ಟುನಿಟ್ಟಿನ ನೀತಿವಂತನಾಗಿರಬೇಕು. ಜೀವದ ಹಂಗನ್ನು ತೊರೆಯುವಂತಹ ಧೈರ್ಯವಂತನಾಗಿರಬೇಕು. ಮತ ತತ್ವಗಳಿಂದ ನಿನ್ನ ತಲೆಯನ್ನು ಕೆಡಿಸಿಕೊಳ್ಳಬೇಡ. ಹೇಡಿಗಳು ಮಾತ್ರ ಪಾಪ ಮಾಡುವರು. ಧೀರರು ತಮ್ಮ ಮನಸ್ಸಿನಲ್ಲಿ ಕೂಡ ಎಂದಿಗೂ ಪಾಪವನ್ನು ಮಾಡುವುದಿಲ್ಲ

**- ಸ್ವಾಮಿ ವಿವೇಕಾನಂದ**



ಮೂಲ: ಶ್ರೀಮದ್ಭಗವದ್ಗೀತೆ

ಸಂಗ್ರಹ: ಬಿ.ಶಿವರಾಮಪ್ಪ ಬೆಂಗಳೂರು.

**ಮಯಿಚ ಅನನ್ಯಯೋಗೇನ ಭಕ್ತಿರವ್ಯಭಿಚಾರಿಣೀ**
**ವಿವಕ್ತದೇಶಸೇವಿತ್ವಮರತಿರ್ಜನಸಂಸದಿ.**

## ಅನನ್ಯಯೋಗೇನ ಭಕ್ತಿರವ್ಯಭಿಚಾರಿಣೀ

ಆತ್ಮವೇ ದೇಹಿ. ದೇಹದಲ್ಲಿರುವವನು ಸಾಕ್ಷಾತ್ತು ಪರಮಾತ್ಮನೇ. ಅವನೇ ಸರ್ವಶ್ರೇಷ್ಠನಾಗಿದ್ದಾನೆ. ಶರಣು ಹೋಗಲು ಅವನೇ ಯೋಗ್ಯನು. ಅವನೇ ನಮಗೆ ತಂದೆ-ತಾಯಿ, ಬಂಧು-ಬಾಂಧವ, ಮಿತ್ರ-ಹಿತೈಷಿ ಎಲ್ಲವೂ ಆಗಿದ್ದಾನೆ. ಅವನನ್ನು ಬಿಟ್ಟು ಬೇರೇ ಯಾರೂ ಇಲ್ಲ - ಈ ಭಾವದಿಂದ ಭಗವಂತನೊಡನೆ ಯಾವ ಅನನ್ಯ ಸಂಬಂಧವಿದೆಯೋ ಅದರ ಹೆಸರು 'ಅನನ್ಯಯೋಗ' ವಾಗಿದೆ. ಈ ಪ್ರಕಾರದ ಸಂಬಂಧದಿಂದ ಕೇವಲ ಭಗವಂತನಲ್ಲಿಯೇ ಅಚಲ ಮತ್ತು ಪೂರ್ಣ ವಿಶುದ್ಧ ಪ್ರೇಮವಿಟ್ಟು ಸತತ ಭಗವಂತನ ಧ್ಯಾನ ಮಾಡುತ್ತಾ ಇರುವುದೇ ಅನನ್ಯ ಯೋಗದ ಮೂಲಕ ಪರಮಾತ್ಮನಲ್ಲಿ 'ಅವ್ಯಭಿಚಾರಿಣೀ' ಭಕ್ತಿ ಮಾಡುವುದಾಗಿದೆ.

ಈ ವಿಧವಾದ ಭಕ್ತಿಯೊಂದಿಗೆ ಇರುವವನು ಸ್ವಾರ್ಥರಹಿತ ಮತ್ತು ಅಭಿಮಾನರಹಿತನಾಗಿರುತ್ತಾನೆ. ಮಮಕಾರವಿಲ್ಲದಿರುತ್ತಾನೆ. ಅವನು ಎಲ್ಲರಲ್ಲೂ ಭಗವಂತನ್ನೇ ಮತ್ತು ಸರ್ವವೂ ಭಗವಂತನದ್ದೇ ಎಂದು ತಿಳಿಯುತ್ತಾನೆ. ನಿಷ್ಕಾಮಭಾವದಿಂದ ಪ್ರೇಮ ಮತ್ತು ಶ್ರದ್ಧೆಯಿಂದ ಸೇವೆ ಸಲ್ಲಿಸುತ್ತಾನೆ. ಅವನ ಯಾವುದೆಲ್ಲ ಕ್ರಿಯೆಗಳು ನಡೆಯುತ್ತವೋ ಅವೆಲ್ಲವೂ ಭಗವಂತನಿಗಾಗಿಯೇ ಆಗಿರುತ್ತವೆ. ಈ ರೀತಿ ಇರುವ ಅಚಂಚಲವಾದ ಭಕ್ತಿಯೇ 'ಅನನ್ಯ ಭಕ್ತಿರವ್ಯಭಿಚಾರಿಣೀ' ಎನ್ನುತ್ತೇವೆ.

## ವಿವಿಕ್ತದೇಶಸೇವಿತ್ವಂ

ಪ್ರಾರಂಭದೆಸೆಯಲ್ಲಿ ಪ್ರಾಪಂಚಿಕ ಮನಸ್ಸಿನ ಜನಗಳಿಂದ ವಿಕ್ಷೇಪ ಉಂಟಾಗದೆ ಇರಲು ಸಾಧನೆಯನ್ನು ಏಕಾಂತ ಸ್ಥಳದಲ್ಲಿ ನಡೆಸುವುದು ಉತ್ತಮ. ಅಂತಹ ಏಕಾಂತ ಸ್ಥಳವನ್ನು ಅವರ ಗೃಹದಲ್ಲಿಯೂ ಏರ್ಪಾಟುಮಾಡಿಕೊಳ್ಳಬಹುದು. ಒಂದು ಪ್ರತ್ಯೇಕವಾದ ಕೊಠಡಿಯುನ್ನು ಧ್ಯಾನ ಮಾಡಲು ವಿನಿಯೋಗಿಸಬಹುದು.

## ಅರತಿರ್ಜನಸಂಸದಿ

'ಜನಸಂಸದಿ' ಎನ್ನುವುದು ಆತ್ಮಜ್ಞಾನರಹಿತರಾದ ಜನರ ಸಮುದಾಯ ಎಂಬುದನ್ನು ಸೂಚಿಸುತ್ತದೆ. ಇಂತಹ ಜನರ ಸಾಂಗತ್ಯ ಧ್ಯಾನ ಸಾಧನೆಗೆ ಅಡ್ಡಿಯಾಗಿ ಬಾಧಕವಾಗುವಂಥದ್ದು. ಕಾರಣ, ಈ ವಿಧವಾದ ವಿಷಯಾಸಕ್ತ ಸಾಂಸಾರಿಕ ಜನಬಾಹುಳ್ಯದಿಂದ ದೂರವಿದ್ದು ಅದರಲ್ಲೂ ಸಹ ಅನಾಸಕ್ತನಾಗಿರುವುದನ್ನು 'ಅರತಿರ್ಜನಸಂಸದಿ' ಎನ್ನುತ್ತಾರೆ.

ಕೇವಲ ಸತ್ಸಾಂಗತ್ಯ ಮತ್ತು ಸಜ್ಜನಸಾಂಗತ್ಯ ಧ್ಯಾನಸಾಧನೆಯಲ್ಲಿ ಸಹಾಯಕಾರಿ ಎನ್ನುವುದು ತಿಳಿಯಬೇಕು.

ಮುಂದು ವರಿಯುವುದು......



ಪ್ರತಿಯೊಬ್ಬನು ತನಗೆ ತಾನೇ ನ್ಯಾಯದಾತನು. ತನ್ನ ಏಳಿಗೆ ಅಥವಾ ಅವನತಿಗೆ ತಾನೇ ಕಾರಣನು. ತನ್ನ ಜೀವಿತ, ಪ್ರತಿಫಲ, ಶಿಕ್ಷೆ ಇವುಗಳಿಗೆ ತಾನೇ ನಿಯಾಮಕನು.

-ಥಿಯಾಸಫಿಕಲ್ ಸೊಸೈಟಿ




# ವೇಮನ ವಿಶ್ವ ಗೀತೆ



## ಮೂರ್ತಿ ಪೂಜೆ

'ಮೂರ್ತಿ ಪೂಜೆ' ಮತ್ತು 'ಸ್ವಾಧ್ಯಾಯ' ಕುರಿತು ವೇಮನಾಚಾರ್ಯರ ಮಾತುಗಳು ಏನು ಎಂಬುದನ್ನು ಈಗ ತಿಳಿದುಕೊಳ್ಳೋಣ.

ಮೂರ್ತಿ ಪೂಜೆಯನ್ನು ಬಹುತೇಕ ಋಷಿಮುನಿಗಳು ತ್ಯಾಜ್ಯವೆಂದು ಕರೆದಿದ್ದಾರೆ. ವಿಷ್ಣುಪುರಾಣದಲ್ಲಿ ಸಹ, 'ಕಾಷ್ಟ ಲೋಹೇಷು ಮೂರ್ಖಾಣಾಂ ಜ್ಞಾನೀನಾಂ ಹೃದಯೇಷು ಚ', ಎಂದರೆ, ಮೂರ್ಖರ ದೇವರು ಕಟ್ಟಿಗೆ ಲೋಹಗಳಲ್ಲಿಯೂ ಮತ್ತು ಜ್ಞಾನಿಗಳ ದೇವರು ಹೃದಯದಲ್ಲಿಯೂ ಇರುವರೆಂದು ಹೇಳಲಾಗಿದೆ.

' ಮನಸಾ ಕಲ್ಪಿತಾ ಮೂರ್ತಿಃ ನೃಣಾಚೇಮೋಕ್ಷಸಾಧನೀ
ಸ್ವಪ್ನಲಬ್ಧೇನ ರಾಜ್ಯೇನ ರಾಜಾ ನ ಮಾನವಸ್ತಥಾ'.

ಕೇವಲ ಮಾನವ ಮನಸ್ಸಿನಿಂದ ಮೂರ್ತಿಯನ್ನು ಕಲ್ಪಿಸಿಕೊಂಡರೆ, ಅದೆಂತು ಮೋಕ್ಷಸಾಧನವಾಗಬಲ್ಲದು ? ಸ್ವಪ್ನದಲ್ಲಿ ರಾಜ್ಯಪಡೆದುಕೊಂಡ ಮಾನವನು ನಿಜಕ್ಕೂ ರಾಜನಾಗಬಲ್ಲನೇ ?

ಆದ್ದರಿಂದ, ವೇಮನ ಯೋಗಿಗಳು ಶಿಲೆಯನ್ನೇ ಶಿವನೆಂದು ಬಗೆಯುವ ಮಂದ ಬುದ್ಧಿಯವರಿಗೆ ಬಗೆ ಬಗೆಯಾಗಿ ತಿಳಿಹೇಳಿದ್ದಾರೆ. ಲೋಹದಿಂದಾಗಲಿ, ಶಿಲೆಯಿಂದಾಗಲಿ ಮೂರ್ತಿಗಳನ್ನು ಮಾಡುವ ವಿಧಾನಗಳನ್ನು ತಿಳಿಸಿ, ಪೊಳ್ಳು ತುಂಬಿ ಮಾಡಿದ ಲೋಹ ಮೂರ್ತಿಯೇ ಆಗಲಿ, ಇಲ್ಲವೆ, ಬಂಡೆಯನ್ನು ಕಾಲಿನಿಂದ ಮೆಟ್ಟಿಕಡೆದ ಶಿಲಾಮೂರ್ತಿಯಾಗಲಿ ಹೇಗೆ ದೇವರಾಗಬಲ್ಲದು? ಅದರಲ್ಲಿ ಪ್ರಾಣವು ಹೇಗೆ ಪ್ರತಿಷ್ಠಾಪಿತವಾದೀತು? ಇದನ್ನು ಸರಿಯಾಗಿ ತಿಳಿಯದೆ, ತಮ್ಮ ಮನೋರಂಜನೆಗಾಗಿ, ರಂಗು ರಂಗಿನ ವಸ್ತ್ರ ಉಡಿಸಿ, ಆಭರಣ ತೊಡಿಸಿ ಇಂದ್ರಿಯ ವ್ಯಾಪಾರದ ರೂಢಿಯನ್ನೇ ಬೆಂಬಲಿಸಿದರೆ , ಅವರನ್ನು ಅಧಮಾಧಮರೆಂದು ಶಾಸ್ತ್ರ ಹೇಳುವುದು ಆಷ್ಟೇ.

1. ಶಿಲೆಯ ನೋಡಿ ನರರು ಶಿವನೆಂದು ಭಾವಿಸರು
ಶಿಲೆಯು ಶಿಲೆಯೇ ಹೊರತು ಶಿವನು ಅಲ್ಲ;
ತನ್ನೊಳಿರುವ ಶಿವನ ತಾನು ತಿಳಿಯನೇಕೋ ?
ವಿಶ್ವದಾಭಿರಾಮ ಕೇಳು ವೇಮಾ.

2, ಶಿವನು ಇರುವನೆನುತೆ, ಶಿಲೆಗಳಿಗೆ ಮಣಿಯುವ,
ಮೂರ್ಖ ಜೀವಿಗಳೇ ಮೋಹ ಬಿಡಿರಿ
ಜೀವಿಯಲ್ಲೆ ಹೊರತು, ಶಿಲೆಯೊಳೇನು ಉಂಟು?
ವಿಶ್ವದಾಭಿರಾಮ ಕೇಳು ವೇಮಾ.

3. ದೇವ-ಗುಡಿಗಳಲ್ಲಿ, ತೀರ್ಥಕ್ಷೇತ್ರದಲ್ಲಿ,
ಮೂಲವರಿಯದಿರಲು, ಮುಕ್ತಿಯಿಲ್ಲ
ಆತ್ಮಮೂಲವರಿಯೆ, ಅದನೆಂತು ತಿಳಿವನು?
ವಿಶ್ವದಾಭಿರಾಮ ಕೇಳು ವೇಮಾ.

4. ಶಿಲೆಯದೇವತೆಗಳ, ಸ್ಥಿರವಾಗಿ ರೂಪಿಸಿ,
ಮಣ್ಣುಪಾಲಾದರು ಮನುಜರೆಲ್ಲ;
ಮಣ್ಣಿನಲ್ಲಿ ಕಲ್ಲು ಮನದೊಳಗೆ ತಿಳಿಯರು
ವಿಶ್ವದಾಭಿರಾಮ ಕೇಳು ವೇಮಾ.

5. ಕಲ್ಲು ಬೊಂಬೆಗೇಕೆ ಕೆಲ ಬಣ್ಣದ ವಸ್ತ್ರ?
ಗುಡಿಗೋಪುರವೆಲ್ಲ ಕಂಭ ಮತ್ತೆ?
ಬಟ್ಟೆ ಅನ್ನ ತಾನು ಬಯಸುತಿಹನೆ ದೇವ ?
ವಿಶ್ವದಾಭಿರಾಮ ಕೇಳು ವೇಮಾ.

ಶ್ರೀಯುತ ಎಸ್.ಆರ್.ಪಾಟೀಲ,
ಹಲಕೋಟಿ, ಧಾರವಾಡ, ಇವರ ಕನ್ನಡ
'ವೇಮನ ವಿಶ್ವಗೀತೆ' ಪುಸ್ತಕದಿಂದ ,
ಸಂಕಲನ-ಬಿ.ಶಿವರಾಮಪ್ಪ ಬೆಂಗಳೂರು.

## ಐತರೇಯ ಉಪನಿಷತ್

ಹಿಂದಿನ ಸಂಚಿಕೆಯಿಂದ..

ಈ ಉಪನಿಷತ್ತು ಋಗ್ವೇದಕ್ಕೆ ಸಂಬಂಧಪಟ್ಟದ್ದು. ಶ್ರೀ ಶಂಕರಾಚಾರ್ಯರು ವರ್ಗೀಕರಿಸಿದ ಹತ್ತು ಮುಖ್ಯ ಉಪನಿಷತ್ತುಗಳಲ್ಲಿ ಇದೂ ಸಹ ಒಂದಾಗಿದೆ. ಈ ಉಪನಿಷತ್ತಿನಲ್ಲಿ ಸೂಕ್ಷ್ಮವಾದ ಕೆಲವು ಬ್ರಹ್ಮಸತ್ಯಗಳ ಕುರಿತು ಹೇಳಲಾಗಿದೆ. ಸೃಷ್ಟಿಯ ಆರಂಭ, ಸೃಷ್ಟಿಯ ರಚನೆ, ಸೃಷ್ಟಿಯ ಸ್ವಭಾವ, ಸೃಷ್ಟಿಯ ಪ್ರಕೃತಿ ಕುರಿತು ಅಲ್ಲದೆ ಮಾನವ ಸೃಷ್ಟಿ ಅವನ ಸ್ವಭಾವ, ಅವನ ಮತ್ತು ಅವನನ್ನು ಸೃಷ್ಟಿಸಿರುವ ಬ್ರಹ್ಮನ ಮಧ್ಯೆ ಇರುವ ಸಂಬಂಧ, ಅವನ ಜೀವನಾಶಯ ಮತ್ತು ಆ ಆಶಯನ್ನು ಪಡೆಯುವ ರೀತಿಗಳ ವಿಚಾರಗಳನ್ನು ಕೂಲಂಕಷವಾಗಿ ತಿಳಿದುಕೊಳ್ಳಲು ಈ ಉಪನಿಷತ್ತು ಅತ್ಯವಶ್ಯವಾದದ್ದು.

'ಮಹೀದಾಸ ಐತರೇಯ' ಎನ್ನುವ ಉತ್ಕೃಷ್ಟ ಮುನಿವರ್ಯರಿಗೆ ಈ ಉಪನಿಷತ್ತು ಹೇಳಲಾಗಿದ್ದುದರಿಂದ, ಇದರ ಹೆಸರು ಐತರೇಯ ಉಪನಿಷತ್ತು ಎನ್ನಲಾಗಿದೆ.

ಈ ಸೃಷ್ಟಿಯ ಆರಂಭ ಅಥವಾ ಆದಿ ಕೇವಲ ಆತ್ಮಸ್ವರೂಪವೇ. ಅಲ್ಲಿಂದಲೇ ಚತುರ್ಭುವನಗಳು ಹೊರಬಂದವು. ಅಂಭೋಲೋಕ, ದಿವ್ಯಲೋಕದ ಜಲರಾಶಿ, ಮರೀಚಿಲೋಕ, ದಿವ್ಯಲೋಕದ ಪ್ರಕಾಶತಲ, ಮಾರಲೋಕ, ಅನಿತ್ಯವಾದ ಭೂತಲ? ಮತ್ತು ಆಪೋಲೋಕ? ನಿಮ್ನಲೋಕದ ಜಲರಾಶಿ ತಲ, ಎಂಬುವಾಗಿವೆ. ಈ ಲೋಕಗಳ ಸಂರಕ್ಷಣೆಗಾಗಿ ವಿರಾಟ ಪುರುಷನನ್ನು ಪ್ರಥಮವಾಗಿ ಸೃಷ್ಟಿಸಲಾಯಿತು. ಆತ್ಮ ಮತ್ತು ಸೃಷ್ಟಿಯ ನಡುವೆ ಅನುಸಂಧಾನಕಾರವಾದ ಈ ವಿರಾಟನದಿಂದ ಪಾಲನಾರ್ಥಕ್ಕೆ ಜ್ಞಾನೇಂದ್ರಿಯಗಳು ತದ್ವ್ಯಾಪಾರಗಳು, ಮತ್ತು ತತ್ಸಂಬಂಧ ಶಕ್ತಿಚೈತನ್ಯಗಳಸಹಿತ ಉದ್ಭವಿಸಿದವು. ಈಶ್ವರನಾದ ಆತ್ಮ ವಿರಾಟಪುರುಷನಿಗೆ ದಾಹ, ಹಸಿವು ಇತ್ಯಾದಿ ಉಂಟುಮಾಡಿದ ಕಾರಣ, ಅವನಿಂದ ಹೊರಬಂದ ಆ ದೇವತೆಗಳಿಗೂ ಅದೇ ರೀತಿ ಕ್ಷುದ್ವ್ಯಾದಿಗಳು ಸೇರಿದವು. ಈ ಸೀಮಿತವಾದ ಪರಿಸ್ಥಿತಿ ಅವರಿಗೆ ಶರೀರಧಾರಣೆಯ ಆವಶ್ಯಕತೆಯನ್ನುಂಟುಮಾಡಿತು. ದೇಹಧಾರಿಗಳಾಗಿದ್ದ ಕೂಡಲೇ ಅನ್ನದ ಆವಶ್ಯಕತೆ ತದ್ವಾರಾ ಸಸ್ಯಸಂತತಿ ಹುಟ್ಟಿದವು. ಈವಿಧವಾದ



ಶರೀರಧಾರಿಯಾದ ವಿರಾಟನಿಗೆ ಅವನ ಶರೀರ ಜೀವಂತವಾಗಿರಲು, ಅವನ ಬ್ರಹ್ಮರಂಧ್ರದಿಂದ ಈಶ್ವರನಾದ ಆತ್ಮವೇ ಶರೀರಪ್ರವೇಶ ಮಾಡಿತು. ದೇಹ ಕ್ಷೇತ್ರವಾಯಿತು. ದೇಹಿಯಾದ ಆತ್ಮವೇ ಕ್ಷೇತ್ರಜ್ಞ ನಾದನು.

ಈ ರೀತಿಯಾದ ಸೃಷ್ಟಿಯ ಜ್ಞಾನವನ್ನೇ ಪ್ರಜ್ಞಾನ ಎನುತ್ತೇವೆ. ಆತ್ಮದ ಅಸ್ತಿತ್ವವನ್ನು ತಿಳಿಯುವುದೇ ಆತ್ಮಜ್ಞಾನ ಎನ್ನಲಾಗುವುದು. ಆತ್ಮಜ್ಞಾನವನ್ನು ಪಡೆಯುವುದೇ ಸೃಷ್ಟಿಯ ರಚನೆಗೆ ಮೂಲಹೇತುವಾಗಿದೆ. ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸಂಯೋಗದ ರಹಸ್ಯವೇ ಆತ್ಮಜ್ಞಾನವಾಗಿದೆ. ಪ್ರತಿಯೊಂದೂ ದೇಹಧಾರಿಗೆ ಆತ್ಮಜ್ಞಾನಿಯಾಗಲು ಅವಕಾಶವನ್ನು ನೀಡುವುದೇ ಜನ್ಮಗಳ ಲಕ್ಷ್ಯವಾಗಿದೆ. ಜೀವಾಂಶಗಳಾದ ಎಲ್ಲಾ ರೀತಿಯ ಜೀವಿಗಳು ಹಸಿವು, ದಾಹ ಇತ್ಯಾದಿಗಳ ಸಂಸಾರಕ್ಕೆ ಒಳಗಾಗಿರುವಂಥವೇ. ಆದ ಕಾರಣ, ಜೀವಿಗಳು ತಮ್ಮ ನಿಜರೂಪವನ್ನು ಅರ್ಥಾತ್, ಆತ್ಮಜ್ಞಾನವನ್ನು ಹೊಂದಿ ಪೂರ್ಣಾತ್ಮವನ್ನು ಸೇರಿರುವುದೇ ದೇಹಧಾರಿಗಳ ನಿಜವಾದ ಗುರಿ ಎನ್ನುವುದು ಈ ಉಪನಿಷತ್ತಿನ ಹೇಳಿಕೆ.

ಮುಂದುವರಿಯುವುದು...






# ಬೇಬಿ ಜೀನಿಯಸ್






ಈ ಚಿತ್ರವು ಮಾರ್ಚ್ 1999 ರಲ್ಲಿ ಯು.ಎಸ್.ಎ ಯಲ್ಲಿ ಬಿಡುಗಡೆಯಾಯಿತು. ಈ ಚಿತ್ರದ ನಿರ್ದೇಶಕರು ಬಾಬ್ ಕ್ಲಾರ್ಕ್ ಹಾಗೂ ಇದರ ನಿರ್ಮಾಪಕರು ಸ್ಟೀವನ್ ಪಾಲ್.

ಡಾ. ಎಲೆನ ಕಿಂಡರ್ ಹಾಗು ಡಾ.ಹೀಪ್, ಇವರಿಬ್ಬರು ಬೇಬಿಕೊ ಎಂಬ ವಿಶ್ವಪ್ರಖ್ಯಾತಿ ಹೊಂದಿರುವ ಬೊಂಬೆಗಳನ್ನು ತಯಾರು ಮಾಡುವ ಕಂಪನಿಯಲ್ಲಿ ಕೆಲಸ ಮಾಡುತ್ತಿರುತ್ತಾರೆ. ಡಾ.ಕಿಂಡರ್ ಹಾಗೂ ಡಾ.ಹೀಪ್ ಇಬ್ಬರು ಮಕ್ಕಳ ಸಂಭಾಷಣೆಯ ಮರ್ಮವನ್ನು ರಹಸ್ಯವಾಗಿ ಪತ್ತೆ ಹಚ್ಚಲು ಯತ್ನಿಸುತ್ತಿರುವ ವಿಷಯ ಜನತೆಗೆ ಗೊತ್ತಿರಲಿಲ್ಲ, ಹಸುಗೂಸುಗಳ ಮಾತಿನಲ್ಲಿ ಅಡಗಿರುವ ಸೃಷ್ಟಿಯ ಹಾಗೂ ಈ ವಿಶ್ವದ ರಹಸ್ಯಗಳನ್ನು ಕಂಡು ಹಿಡಿಯಬೇಕೆಂದು ಅವರಿಬ್ಬರ ಉದ್ದೇಶ. ಸ್ಲಯ್ ಎಂಬ ಬುದ್ಧಿವಂತ ಮಗು, ಆ ಸಂಶೋಧನಾಲಯದಿಂದ ತಪ್ಪಿಸಿಕೊಂಡಾಗ, ಈ ಇಬ್ಬರು ಡಾಕ್ಟರ್‌ಗಳಿಗೆ ಗೊಂದಲ ಉಂಟಾಗುತ್ತದೆ. ಈ ಬುದ್ಧಿವಂತ ಮಗುವು ಹೊರ ಪ್ರಪಂಚದ ಎಲ್ಲ ಮಕ್ಕಳನ್ನು ಒಂದುಗೂಡಿಸಿ, ಆ ಸಂಶೋಧನಾಲಯದಲ್ಲಿ ಬಂಧಿಯಾಗಿರುವ ಮಕ್ಕಳನ್ನು ಬಿಡುಗಡೆ ಮಾಡಲು ಯತ್ನಿಸುತ್ತದೆ. ಕಿಂಡರ್ ಹಾಗು ಹೀಪ್ ಈಗ ಸ್ಲಯ್ ಎಂಬ ಮಗುವನ್ನು ಹುಡುಕಿ ತೆಗೆಯಬೇಕು, ಇಲ್ಲವಾದಲ್ಲಿ ಅವರು ಪಟ್ಟ ಶ್ರಮವೆಲ್ಲವೂ ವ್ಯರ್ಥವಾಗುತ್ತದೆಂದು ತಳಮಳಗೊಳ್ಳುತ್ತಾರೆ.

ಈ ಇಬ್ಬರು ವಿಜ್ಞಾನಿಗಳು, ಮೇಧಸ್ಸುಳ್ಳ, ಅಪಾರ ಬುದ್ಧಿ ಕೌಶಲ್ಯತೆಯುಳ್ಳ ಮಕ್ಕಳ ಬಗ್ಗೆ ಅಧ್ಯಯನದ ಮೂಲಕ, ತಮ್ಮ ಬೇಬಿಕೊ ಥೀಮ್ ಪಾರ್ಕ್‌ಗೆ ಹಣ ಸಂಪಾದಿಸಲು ಪ್ರಯತ್ನವನ್ನು ಮಾಡುತ್ತಾರೆ. ಮಕ್ಕಳು ಬೆಳೆಯುತ್ತಿದ್ದಂತೆ ಮಾತನಾಡಲು ಶುರುಮಾಡಿ, ತಮ್ಮ ವಿಶ್ವಜ್ಞಾನವನ್ನು ಮರೆಯುತ್ತವೆ. ಸ್ಲಯ್ ತುಂಬಾ ತುಂಟಾಟ ಮಾಡುವ ಮಗು. ಅಲ್ಲಿಂದ ತಪ್ಪಿಸಿಕೊಂಡು ಓಡುವಾಗ, ಅಚಾನಕ್ ತನ್ನ ಅವಳಿ ಸಹೋದರ ವ್ಹಿಟ್‌ನ್ನು ಒಂದು ಶಾಪಿಂಗ್ ಮಾಲ್‌ನಲ್ಲಿ ಭೇಟಿಯಾಗುತ್ತದೆ. ಈ ಸೈಂಟಿಸ್ಟುಗಳು ಮಗುವನ್ನು ಹುಡುಕುತ್ತಿರುವಾಗ ವ್ಹಿಟನ್ನು ಸ್ಲಯ್ ಎಂದು ತಿಳಿದು ಪುನಃ ಲ್ಯಾಬ್ ಗೆ ತಂದು ಬಂಧಿಸುತ್ತಾರೆ. ಅತ್ತ ಸ್ಲಯ್ ತನ್ನ ಸಾಕು ತಾಯಿಯ ಜೊತೆ ಮನೆಗೆ ಹೋಗುತ್ತದೆ.

ಮಕ್ಕಳು ಗ್ರೇಟ್ ಮಾಸ್ಟರ್ಸ್. ಅವರು ಅಪಾರ ಜ್ಞಾನ ಸಂಪನ್ನರು. ಐದನೇ ವರ್ಷದವರೆಗು ಅವರು ಆಡುವ ನುಡಿಯ ಹೆಸರು ವಿಶ್ವ ಭಾಷೆ (ಯೂನಿವರ್ಸಲ್ ಕಮ್ಯೂನಿಕೇಷನ್). ಈ ಚಿತ್ರದಲ್ಲಿ ಆ ಸೈಂಟಿಸ್ಟುಗಳು ಆ ಭಾಷೆಯನ್ನು ತಿಳಿದುಕೊಳ್ಳಲು ಮಾಡುವ ಪ್ರಯತ್ನವು ವಿಫಲವಾಗುತ್ತದೆ. ಆ ಮಗುವಿನ ತಂದೆಗೆ ಈ ಮಕ್ಕಳ ಭಾಷೆಯು ತಿಳಿದಿರುವ ಕಾರಣ ಮಕ್ಕಳು ಆಡುವ ಮಾತುಗಳನ್ನು ಅರ್ಥ ಮಾಡಿಕೊಳ್ಳುತ್ತಾನೆ.

ಈ ಚಿತ್ರವು ನೋಡುಗರ ಕಣ್ಣುಗಳನ್ನು ತೆರೆಸುತ್ತದೆ. ಪ್ರತಿ ವ್ಯಕ್ತಿಯಲ್ಲೂ ಇಂತಹ ಸಾಮರ್ಥ್ಯ ಇರುತ್ತದೆ. ಆದರೆ, ಬೆಳೆದಂತೆ ನಾವದನ್ನು ಮರೆಯುತ್ತೇವೆ. ಯಾವಾಗ ನಾವು ಧ್ಯಾನದಲ್ಲಿ ತೊಡಗುತ್ತೇವೋ ಆಗ ವಿಶ್ವ ಶಕ್ತಿಯ ಪ್ರಭಾವದಿಂದ ಮತ್ತೆ ವಿಶ್ವ ಭಾಷೆಯು ಅಂಕುರಿಸುತ್ತದೆ. ನಾವು ಮತ್ತೆ ಬೇರೆ ಉನ್ನತ ಲೋಕಗಳೊಂದಿಗೆ ಮಾತನಾಡಬಹುದು.

ಇಂತಹ ಅದ್ಭುತ ಚಿತ್ರವನ್ನು ನಮಗೆ ಕೊಟ್ಟ ಈ ಚಿತ್ರದ ನಿರ್ದೇಶಕರನ್ನು 'ಧ್ಯಾನ ಕಸ್ತೂರಿ'ಯ ತಂಡ ಮನಃ ಪೂರ್ವಕವಾಗಿ ಅಭಿನಂದಿಸುತ್ತದೆ.

ಮೂಲ : www.rottentomatoes.com



# ನಿತ್ಯ ಅನ್ನದಾನ ಸೇವಾ ಕಾರ್ಯಕ್ರಮ

ಪಿರಮಿಡ್ ವ್ಯಾಲಿಗೆ ಭೇಟಿ ನೀಡುವ ಧ್ಯಾನಿಗಳಿಗೆ ಉಚಿತ ಊಟದ ವ್ಯವಸ್ಥೆಯನ್ನು ಮಾಡುವ ಉತ್ತಮ ಉದ್ದೇಶದಿಂದ, ಪಿರಮಿಡ್ ಸ್ಪಿರಿಚ್ಯುಯಲ್ ಟ್ರಸ್ಟ್ (ಇಂಡಿಯಾ) ಪ್ರತಿನಿತ್ಯ ಅನ್ನದಾನ ಸೇವೆಯನ್ನು ಆರಂಭಿಸಿದೆ. ಇದರ ಪ್ರಮುಖ ಉದ್ದೇಶವೇನೆಂದರೆ, ಪಿರಮಿಡ್ ವ್ಯಾಲಿಯಲ್ಲಿ ದೊರೆಯುವ ಸೌಲಭ್ಯಗಳನ್ನು ಆರ್ಥಿಕವಾಗಿ ದುರ್ಬಲರಾದ ಜನತೆಗೂ ಸಹ ಕಡಿಮೆ ವೆಚ್ಚದಲ್ಲಿ ಒದಗಿಸುವುದಾಗಿದೆ.

ಆತ್ಮಕ್ಕೆ, ಧ್ಯಾನ ಎಂಬ ಆರೋಗ್ಯಕರ ಆಹಾರವನ್ನು ಪಡೆಯಲು, ಮೊದಲು ದೇಹಕ್ಕೂ ಸಹ ಆಹಾರ ಬೇಕು. ಅಂದರೆ, ಆಧ್ಯಾತ್ಮಿಕ ಜಿಜ್ಞಾಸುಗಳ ಕಲಿಕೆ ಮತ್ತು ಆತ್ಮೋದ್ಧಾರದ ಕಾರ್ಯವು ಚುರುಕಾಗಿ ನಡೆಯಲು, ಮೊದಲು, ತಮ್ಮ ದೈಹಿಕ ಅಗತ್ಯಗಳ ಚಿಂತೆಯಿಂದ ಅವರು ಮುಕ್ತರಾಗಬೇಕು. ಪಿರಮಿಡ್ ವ್ಯಾಲಿಯಲ್ಲಿ ಉಳಿಯುವ ಪ್ರತಿಯೊಬ್ಬ ಧ್ಯಾನಿಗೆ "ನಿತ್ಯ ಅನ್ನದಾನ ಸೇವೆ" ಯೋಜನೆಯಲ್ಲಿ ಪ್ರತಿನಿತ್ಯ ಎರಡು ಉಚಿತ ಊಟ ದೊರೆಯುವುದರಿಂದ, ಅವರು ಧ್ಯಾನದ ಎಡೆಗೆ ತಮ್ಮ ಪೂರ್ಣ ಗಮನವನ್ನು ನೀಡಲು ಸಾಧ್ಯವಾಗುತ್ತದೆ. ಪರಿಣಾಮಕಾರಿಯಾಗಿ, ನಿರಂತರವಾಗಿ ಈ ಯೋಜನೆಯನ್ನು ನಡೆಸಲು, ಟ್ರಸ್ಟ್ ಒಂದು 'ಶಾಶ್ವತ ನಿಧಿ'ಯನ್ನು ಸ್ಥಾಪಿಸಿದೆ. ವ್ಯಕ್ತಿಗಳು ಮತ್ತು ಸಂಘ-ಸಂಸ್ಥೆಗಳು ಈ ಯೋಜನೆಗೆ ತಮ್ಮ ದೇಣಿಗೆಗಳನ್ನು ಉದಾರವಾಗಿ ನೀಡಲು ಕೋರಲಾಗಿದೆ.

ಈ ಯೋಜನೆಗೆ ನೀವು ನೀಡುವ ಉದಾರವಾದ ಕೊಡುಗೆಗಳು ಈ ಕೆಳಕಂಡಂತೆ ಉಪಯುಕ್ತವಾಗುತ್ತದೆ.

- ಗ್ರಾಮೀಣ ವರ್ಗದ ಮತ್ತು ಆರ್ಥಿಕವಾಗಿ ದುರ್ಬಲರಾದ ಜನತೆಯು ಪಿರಮಿಡ್ ವ್ಯಾಲಿಗೆ ಭೇಟಿ ನೀಡುತ್ತಾರೆ ಮತ್ತು ಅವರ ಆಧ್ಯಾತ್ಮಿಕ ಪ್ರಗತಿಗೆ ಇದು ಸಹಾಯಕವಾಗುತ್ತದೆ.
- ದೈಹಿಕ ಮೂಲಭೂತ ಅಗತ್ಯಗಳ ಎಡೆಗೆ ಧ್ಯಾನಿಗಳ ಚಿಂತೆಗಳನ್ನು ದೂರ ಮಾಡಿ, ಪರಿಣಾಮಕಾರಿಯಾಗಿ ಧ್ಯಾನ ಮಾಡಲು ಅವರಿಗೆ ಅನುವುಮಾಡಿಕೊಡುವುದು ಸಾಧ್ಯವಾಗುತ್ತದೆ.
- ನಮ್ಮ ಆಧ್ಯಾತ್ಮಿಕ ಹೊಣೆಗಾರಿಕೆಯನ್ನು ನಿಭಾಯಿಸಲು ಸಹಕಾರಿಯಾಗುತ್ತದೆ.

ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟೀಸ್ ಮೂವ್‌ಮೆಂಟ್

ಇದನ್ನು ಬ್ರಹ್ಮರ್ಷಿ ಪತ್ರೀಜಿಯವರು 1990ರಲ್ಲಿ ಸ್ಥಾಪಿಸಿದರು. ಪ್ರಸ್ತುತದಲ್ಲಿ, ಇದು ಒಂದು ತನ್ನದೇ ರೀತಿಯಲ್ಲಿ ಮೊತ್ತಮೊದಲ ಹೊಸಯುಗದ ಆಧ್ಯಾತ್ಮಿಕ ಆಂದೋಳನವಾಗಿದೆ. ಪಿರಮಿಡ್ ಸ್ಪಿರಿಚ್ಯುಯಲ್ ಸೊಸೈಟಿಗಳು ಲಾಭ-ರಹಿತ, ಮತಾತೀತ, ವರ್ಗ-ರಹಿತ, ಸ್ವಯಂ-ಸೇವಾ ಸಂಸ್ಥೆಗಳಾಗಿವೆ. ಧ್ಯಾನ ಮತ್ತು ಸಸ್ಯಾಹಾರೀ ಜೀವನ ಕ್ರಮವನ್ನು ಪ್ರಚುರಪಡಿಸುವುದೇ ಇವುಗಳ ಪ್ರಮುಖ ಉದ್ದೇಶವಾಗಿದೆ ಮತ್ತು ಪ್ರತಿಯೊಬ್ಬರಿಗೂ ಸಹ ದೈಹಿಕ, ಮಾನಸಿಕ ಮತ್ತು ಬೌದ್ಧಿಕ ಆರೋಗ್ಯವನ್ನು ಒದಗಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುವುದೇ ಮೂಲ ಗುರಿಯಾಗಿದೆ.

ಪಾವತಿ ಮಾಹಿತಿಗಳು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸಬಹುದು.

'The Pyramid Spiritual Trust (India), Anna Dana Seva' ಎಂಬ ಹೆಸರಿನಲ್ಲಿ ಬ್ಯಾಂಕ್ ಡ್ರಾಫ್ಟನ್ನು ಪಡೆದು, ಭರ್ತಿಮಾಡಿದ ಡೊನೇಷನ್ ಫಾರಂನೊಂದಿಗೆ, ಪಿರಮಿಡ್ ಸ್ಪಿರಿಚ್ಯುಯಲ್ ಟ್ರಸ್ಟ್ (ಇಂಡಿಯಾ), #609/1, 15ನೇ ಕ್ರಾಸು, ಜೆ.ಪಿ.ನಗರ, 6ನೇ ಹಂತ, ಬೆಂಗಳೂರು - 560 078 ಈ ವಿಳಾಸಕ್ಕೆ ಕಳುಹಿಸಬಹುದು.

ದಾನಿಗಳಿಗೆ ದೊರೆಯುವ ಸೌಲಭ್ಯಗಳು:



- ರೂ.10,000/-ವರೆಗಿನ ದೇಣಿಗೆ ನೀಡುವ ದಾನಿಗಳ ಹೆಸರನ್ನು ಪಿರಮಿಡ್ ವ್ಯಾಲಿಯಲ್ಲಿ ವಾರ್ಷಿಕವಾಗಿ ನಡೆಯುವ ಬುದ್ಧಪೂರ್ಣಿಮೆ ಕಾರ್ಯಕ್ರಮದಲ್ಲಿ ಪ್ರದರ್ಶಿಸುವ ಪೋಸ್ಟರ್‌ನಲ್ಲಿ ಪ್ರಕಟಿಸಲಾಗುವುದು.
- ರೂ.50,000/-ಕ್ಕೂ ಮೇಲ್ಪಟ್ಟು ದೇಣಿಗೆ ನೀಡುವವರ ಹೆಸರನ್ನು ಮೇಲೆ ಹೇಳಿದಂತೆ ಪೋಸ್ಟರ್‌ನಲ್ಲಿ ಪ್ರಕಟಿಸುವುದರೊಂದಿಗೆ, ಪಿರಮಿಡ್ ವ್ಯಾಲಿಯ ವೆಬ್‌ಸೈಟ್‌ನಲ್ಲಿಯೂ ಸಹ ಪ್ರಕಟಿಸಲಾಗುವುದು ಮತ್ತು ಪಿರಮಿಡ್ ವ್ಯಾಲಿಯಲ್ಲಿ ಒಂದು ವಾರದ ಕಾಲ ವಸತಿ ಸೌಲಭ್ಯವನ್ನು ಒಮ್ಮೆಗೆ ಉಚಿತವಾಗಿ ಒದಗಿಸಲಾಗುವುದು.
- ರೂ.2,50,000/-ರವರೆಗೆ ದೇಣಿಗೆ ನೀಡುವವರಿಗೆ ಈ ಮೇಲ್ಕಂಡ ಎಲ್ಲಾ ಸೌಲಭ್ಯಗಳನ್ನು ನೀಡುವುದರೊಂದಿಗೆ, ಅವರ ಹೆಸರನ್ನು ಪಿರಮಿಡ್ ವ್ಯಾಲಿಯಲ್ಲಿನ ದಾನಿಗಳ ಪ್ರದರ್ಶನ ಫಲಕದಲ್ಲಿ ಮತ್ತು ವೆಬ್‌ಸೈಟ್‌ನಲ್ಲಿ ಶಾಶ್ವತವಾಗಿ ಹಾಕಲಾಗುವುದು. ಅಲ್ಲದೆ, ವಾರ್ಷಿಕವಾಗಿ ಒಂದು ವಾರದ ಕಾಲದಂತೆ, 15 ವರ್ಷಗಳವರೆಗೆ ಪಿರಮಿಡ್ ವ್ಯಾಲಿಯಲ್ಲಿ ಉಚಿತ ವಸತಿ ಸೌಲಭ್ಯವನ್ನು ನೀಡಲಾಗುವುದು.
- ರೂ.2,50,000/-ಕ್ಕೂ ಮೇಲ್ಪಟ್ಟು ದೇಣಿಗೆ ನೀಡುವವರಿಗೆ ಮೇಲ್ಕಂಡ ಎಲ್ಲಾ ಸೌಲಭ್ಯಗಳೊಂದಿಗೆ, ವಾರ್ಷಿಕವಾಗಿ ಎರಡು ವಾರದ ಕಾಲದಂತೆ, 15 ವರ್ಷಗಳವರೆಗೆ ಪಿರಮಿಡ್ ವ್ಯಾಲಿಯಲ್ಲಿ ಉಚಿತ ವಸತಿ ಸೌಲಭ್ಯವನ್ನು ನೀಡಲಾಗುವುದು.

ಈ ಕೆಳಕಂಡ ಬ್ಯಾಂಕುಗಳ ಖಾತೆಗಳಿಗೆ ದೇಣಿಗೆಗಳನ್ನು ನೇರವಾಗಿ ಪಾವತಿಸಬಹುದು.

ಬ್ಯಾಂಕ್ ವಿವರ:ಎಸ್.ಬಿ.ಐ., ಜೆ.ಪಿ.ನಗರ, ಬೆಂಗಳೂರು - 30794047532

ಆಂಧ್ರ ಬ್ಯಾಂಕ್, ಹಾರೋಹಳ್ಳಿ - 145810100007675

ಮತ್ತು ಬ್ಯಾಂಕಿನಲ್ಲಿ ಸಂದಾಯದ ವಿವರವನ್ನು 'ಡೊನೇಷನ್ ಫಾರಂ'ನಲ್ಲಿ ಒದಗಿಸಲು ಕೋರಿದೆ. ಇದಕ್ಕಾಗಿ ಇಲ್ಲಿರುವ ಫಾರಂಅನ್ನು ಭರ್ತಿಮಾಡಿ, ಸ್ಕ್ಯಾನ್ ಮಾಡಿ, register@pyramidvalley.org ಈ ವಿಳಾಸಕ್ಕೆ ಇ-ಮೇಯ್ಲ್ ಮಾಡಬಹುದು.

ಪಿರಮಿಡ್ ಸ್ಪಿರಿಚ್ಯುಯಲ್ ಟ್ರಸ್ಟ್ (ಇಂಡಿಯಾ)
#609/1, 15ನೇ ಕ್ರಾಸು, ಜೆ.ಪಿ.ನಗರ, 6ನೇ ಹಂತ,
ಬೆಂಗಳೂರು - 560 078,
ದೂ.:080-4343 2525, +91 92417 38032

**ಪಿರಮಿಡ್ ವ್ಯಾಲಿ ಕ್ಯಾಂಪಸ್:**
ಕೆಬ್ಬೆದೊಡ್ಡಿ ಗ್ರಾಮ, ಹಾರೋಹಳ್ಳಿ ಹೋಬಳಿ,
ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ
+91 94481 77563, +91 97390 59143

# ಮುಗುಳ್ನಗೆ



ತಿಂಮನ ಹೆಂಡತಿಯನ್ನು ಡಾಕ್ಟರು ಪರೀಕ್ಷೆ ಮಾಡಿ ತಲೆಯಲ್ಲಾಡಿಸಿದರು.
''ಏನೂ ಆಗಿಲ್ಲವಯ್ಯಾ, ಚೆನ್ನಾಗಿಯೇ ಇದ್ದಾರೆ.''
''ಇಲ್ಲ ಡಾಕ್ಟರೇ, ನೀವು ಸರಿಯಾಗಿ ನೋಡಲಿಲ್ಲ, ಮಾತನಾಡುವಾಗ ಮಧ್ಯೆಮಧ್ಯೆ ನಿಲ್ಲಿಸಿಬಿಡುತ್ತಾಳೆ.''
''ಏಕೆ?''
''ಉಸಿರಾಡಲಿಕ್ಕೆ.''

★ ★ ★

ತಿಂಮ ಊರಿಗೆ ಬಂದುದೇ ತಡ, ಮನೆಯಾಕೆ ಶುರುಮಾಡಿಬಿಟ್ಟಳು:
''ಪಕ್ಕದ ಮನೆಯ ಶಾರದಮ್ಮನಿಗೆ ಆಕೆಯ ಗಂಡ ಏನೇನು ಮಾಡಿಸಿದ್ದಾರೆ ನೋಡಿ...''
''ಏನು ಮಾಡಿಸಿದ್ದಾರಂತೆ?''
ತಿಂಮ ಕೇಳಿದ.
''ವಜ್ರದ ಓಲೆ ತಂದಿದ್ದಾರೆ. ರೇಡಿಯೋ,ಬಳೆ, ಇನ್ನೂ ಏನೇನೋ ಚಿನ್ನದ ಒಡವೇನೆಲ್ಲ ತಂದುಕೊಟ್ಟಿದ್ದಾರೆ.''
''ಹೂ, ಏನು ಈಗ?''
''ನೀವೇನು ತಂದುಕೊಟ್ಟಿರಿ?''
ಗಾಬರಿಯಿಂದ ಕೇಳಿದ ತಿಂಮ-
''ಯಾರು ನಾನೇ? ನಾಳೆ ತಿಳಿದರೆ ಸುಮ್ಮನಿರುತ್ತಾನೆಯೇ ಆ ಶಾರದಮ್ಮನ ಗಂಡ?

★ ★ ★

ಬೆಂಗಳೂರು ನಗರವನ್ನು ನೋಡಲು ಹೊಸದಾಗಿ ಬಂದ ತಿಂಮ. ಅಲ್ಲಿ-ಇಲ್ಲಿ ನೋಡುತ್ತ ಊರೆಲ್ಲ ಸುತ್ತಿದ. ಕೈಲಿದ್ದ ಕಾಸು ಒಳ್ಳೆಯ ವೇಗದಲ್ಲಿ ಓಡುತ್ತಿತ್ತು. ಕತ್ತಲಾದ ಮೇಲೆ ಒಬ್ಬನೇ ಬರುತ್ತಿದ್ದ ತಿಂಮನನ್ನು ಮೂವರು ಗೂಂಡಾಗಳು ಹಿಡಿದರು.
''ಜೇಬಿನಲ್ಲಿರುವ ಹಣವನ್ನೆಲ್ಲಾ ಸುರಿದು ಮುಂದೆ ಹೋಗು'' ಎಂದರು.
''ಕೊಡುವುದಿಲ್ಲ.''
ತಕರಾರು ಹೂಡಿದ ತಿಂಮ.
''ನಿನ್ನ ತಲೆ ತೆಗೆಯುತ್ತೇವೆ.''
''ಆಗತ್ಯವಾಗಿ ತೆಗೆಯಿರಿ. ತಲೆ ಇಲ್ಲದೆ ವರ್ಷಗಟ್ಟಲೆ ಇರಬಹುದು ನಿಮ್ಮ ಬೆಂಗಳೂರಿನಲ್ಲಿ, ಹಣವಿಲ್ಲದೆ ಕಾಲು ಗಂಟೆಯೂ ಸಾಧ್ಯವಿಲ್ಲ.''

★ ★ ★

ತಿಂಮ ಸಪತ್ನೀಕನಾಗಿ ಪ್ರಯಾಣ ಹೊರಟ ಒಂದು ಸಾರಿ. ದಾರಿಯಲ್ಲಿದ್ದ ನದಿಯೊಂದನ್ನು ದಾಟಬೇಕಾಯಿತು. ಇನ್ನಿತರ ಪ್ರಯಾಣಿಕರುಗಳೊಂದಿಗೆ ತಿಂಮ ದಂಪತಿಗಳು ಹರಿಗೋಲಿನಲ್ಲಿ ಏರಿ ಕುಳಿತರು. ಮಧ್ಯ ನದಿ, ಹರಿಗೋಲು ಹೊಯ್ದಾಡಿ ಮಗುಚಿಕೊಳ್ಳುವಂತಾಯಿತು. ದಿಗ್ಭ್ರಮೆಯಿಂದ ಕಿರುಚಿದರು. ಗಾಬರಿಯಿಂದ ಅಂಬಿಗ ಕೂಗಿಕೊಂಡ.
''ಹೆಚ್ಚು ಭಾರವಾದುದನ್ನು ನದಿಯಲ್ಲಿ ಬಿಸುಟುಬಿಡಿ. ಹೂ ಬೇಗ ಬೇಗ!''
ಅವರಿವರು ಗಂಟು ಮೂಟೆಗಳನ್ನು ನದಿಗೆ ಎಸೆದರು.
ತಿಂಮ?

★★★

ಮೂರು ಜನ ಸರ್ಜನ್‌ಗಳು ಕಾಫಿ ಸೇವಿಸುತ್ತಾ ತಮ್ಮ ತಮ್ಮ ಸಾಧನೆಗಳ ಬಗ್ಗೆ ಕೊಚ್ಚಿಕೊಳ್ಳುತ್ತಿದ್ದರು. ಮೊದಲನೆಯವ ಹೇಳಿದ:
"ನಾನು ಒಬ್ಬ ರೋಗಿಗೆ ಬಲಗೈಯನ್ನು ಗ್ರಾಫ್ಟ್ ಮಾಡಿದೆ, ಆತ ಇಂದು ಪ್ರಖ್ಯಾತ ಕ್ರಿಕೆಟ್ ಆಟಗಾರನಾಗಿದ್ದಾನೆ."

"ಅದೇನು ಮಹಾ " ಹೇಳಿದ ಎರಡನೆಯವನು, "ನಾನು ಒಬ್ಬ ಮತ್ತೊಬ್ಬನ ಕಾಲನ್ನು ಜೋಡಿಸಿದೆ. ಆತ ಇಂದು ಒಲಂಪಿಕ್‌ನಲ್ಲಿ ಓಟದ ಚಿನ್ನದ ಮೆಡಲ್ ಪಡೆಯುವ ಓಟಗಾರನಾಗಿದ್ದಾನೆ. "

"ಆದರೆ ಏನು?" ಕೇಳಿದ ಮೂರನೆಯವ, " ನಾನು ಕತ್ತೆಯ ಮುಖಕ್ಕೆ ನಗೆಯೊಂದನ್ನು ಸಿಕ್ಕಿಸಿದೆ. ಅದು ಇಂದು ಅಮೇರಿಕದ ಪ್ರೆಸಿಡೆಂಟ್ ಆಗಿದೆ."

★★★

ಒಮ್ಮೆ ಬೂಲಿಯನ್ ಬಾಬನ ನಾಯಿ ಮನೆಬಿಟ್ಟು ಓಡಿ ಹೋಯಿತಂತೆ.
ಯಾರೋ ಒಬ್ಬರು ಆ ನಾಯಿಯನ್ನು ಕೇಳಿದರಂತೆ: "ಯಾಕೆ ನೀನು ಮನೆ ಬಿಟ್ಟು ಓಡಿಹೋದೆ?"
ನಾಯಿ ಹೇಳಿತು: " ದಿನಾ ರಾತ್ರಿ ಆತ ಸಂಗೀತ ಅಭ್ಯಾಸ ಮಾಡ್ತಾನೆ. ಬೆಳಗ್ಗೆ ಜನ ನನಗೆ ಕಲ್ಲು ಹೊಡಿತಾರೆ."

★★★

# ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್

ಬ್ರಹ್ಮರ್ಷಿ ಪತ್ರೀಜಿ ಅವರ ಸಂಕಲ್ಪ:

' ಧ್ಯಾನ ಜಗತ್ 2012 ' ಇದು ಬ್ರಹ್ಮರ್ಷಿ ಸುಭಾಷ್ ಪತ್ರೀಜಿಯವರ ನಿನಾದ. ನಾವಿರುವ ಭೂಮಂಡಲವನ್ನು ರಕ್ಷಿಸಿಕೊಳ್ಳಬೇಕಾದುದು ನಮ್ಮೆಲ್ಲರ ಆದ್ಯ ಕರ್ತವ್ಯ. ನಾವು ನಮ್ಮ ಮಕ್ಕಳಿಗಾಗಿ ಹಣ ಆಸ್ತಿಗಳು ಏನೆಲ್ಲಾ ಮಾಡುತ್ತೇವೆ. ಆದರೆ ಅವರು ಮುಂದಿನ ದಿನಗಳಲ್ಲಿ ಜೀವಿಸಲು ಸಾಧ್ಯವಾಗದೇ ಇರುವ ರೀತಿಯಲ್ಲಿ ಭೂಮಂಡಲ ಬದಲಾಗುತ್ತಿದೆ. ಇದಕ್ಕೆ ನಾವೆಲ್ಲರೂ ಕೂಡ ಕಾರಣರು. ಈಗ ನಮ್ಮ ಮುಂದಿನ ಪೀಳಿಗೆಗೆ ಬೇಕಾಗಿರುವುದು ಹಣ ಅಂತಸ್ತು ಅಲ್ಲವೇ ಅಲ್ಲ. ಅವರಿಗೆ ಬೇಕಾಗಿರುವುದು ಸ್ವಚ್ಛವಾದ ನಿಸರ್ಗದಿಂದ ಕೂಡಿದ ಈ ಭೂಮಿಯ ಸಹಜತ್ವ

## ' ಧ್ಯಾನ ಜಗತ್ 2012' ಯಾಕೆ?

ಮುಂದೊಂದು ದಿನ '' ಗ್ಲೋಬಲ್ ವಾರ್ಮಿಂಗ್ '' ಎಂಬ ಮಹಾಮ್ಮಾರಿ ಈ ಭೂಮಿಯನ್ನು ಅಲ್ಲೋಲ ಕಲ್ಲೋಲ ಮಾಡಲಿದೆ ಎಂಬುದು ಕಠೋರ ಸತ್ಯ. ಅದರಿಂದ ಈ ಭೂಮಿಯನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಧ್ಯಾನ ಜಗತ್ ನಿರ್ಮಾಣವಾಗಬೇಕಾಗಿದೆ.

## ' ಧ್ಯಾನ ಜಗತ್ 2012 ' ಗಾಗಿ ಕಂಕಣ : ಟ್ರಸ್ಟ್ ಉಗಮ :

ಈ ಭೂಮಂಡಲದ ಬಿಸಿಯಿಂದ (ಗ್ಲೋಬಲ್ ವಾರ್ಮಿಂಗ್ ) ಪೃಥ್ವಿಯನ್ನು ರಕ್ಷಿಸಲು ನಾವೆಲ್ಲ ಕಂಕಣಬದ್ಧರಾದರೆ, ಅದನ್ನು ತಡೆಗಟ್ಟಲು ಸಾಧ್ಯವಿದೆ. ಆದರೆ 2012 ತುಂಬಾ ಹತ್ತಿರದಲ್ಲಿದೆ. ಇಂದಿನಿಂದ ಪ್ರತಿದಿನ, ಪ್ರತಿ ಕ್ಷಣವೂ ಸಹ ನಮಗೆ ಅತ್ಯಮೂಲ್ಯವಾದುದು. ಆದಕ್ಕಾಗಿಯೇ ನಾವು ಕರ್ನಾಟಕ ಧ್ಯಾನ ಪ್ರಚಾರ ಟ್ರಸ್ಟ್ ಸ್ಥಾಪಿಸಿರುವುದು.

## ಟ್ರಸ್ಟ್‌ನ ಉದ್ದೇಶಗಳು :

1. ಪ್ರತಿಯೊಬ್ಬರ ಮನಸ್ಸು ಪರಿಶುದ್ಧವಾಗಿಸಬೇಕು
2. ನಾವು ಕೇವಲ ದೇಹವಲ್ಲ, ನಾವು ಅಪಾರ ಪ್ರಾಣಶಕ್ತಿಯಿಂದ ತುಂಬಿಕೊಂಡಿರುವ ಪರಮಚೇತನ ಎಂಬುದನ್ನು ಎಲ್ಲರಿಗೂ ತಿಳಿಯುವಂತೆ ಮಾಡುವುದು.
3. ನಾವು ಹೇಗೆ ಸ್ವಚ್ಛಂದವಾಗಿ ಜೀವಿಸುತ್ತಿದ್ದೇವೋ ಹಾಗೇಯೇ ಉಳಿದ ಎಲ್ಲಾ ಜೀವ ಜಂತುಗಳು, ಜಲಚರಗಳು ವೃಕ್ಷರಾಶಿಗಳು ನಮ್ಮಂತೆ ಜೀವಿಸಲು ಅವುಗಳಿಗೆ ಅವಕಾಶ ಕಲ್ಪಿಸಿಕೊಡುವ ತಿಳುವಳಿಕೆಯನ್ನು ಎಲ್ಲರಲ್ಲಿ ಮೂಡಿಸುವುದು.
4. ನಾವೆಲ್ಲರೂ ಸಸ್ಯಾಹಾರಿಗಳಾಗಿ ಗಿಡಮರಗಳು ಬೆಳೆಸುವುದು ಹಾಗೂ ಮನಸ್ಸಿನಲ್ಲಿರುವ ಮಲಿನವನ್ನು ಸಂಪೂರ್ಣವಾಗಿ ಅಳಿಸಿ ಹಾಕುವುದು.
5. ಜಾತಿ, ಮತ, ಪ್ರಾಂತೀಯತೆ, ದೇಶವೆಂಬ ಎಲ್ಲ ಮಿತಿಗಳನ್ನು ದಾಟಿ ಜೀವಿಸುವುದು.
6. ಮೊದಲು ಕರ್ನಾಟಕವನ್ನು ಒಂದುಗೂಡಿಸುವ ನಂತರ ದೇಶವನ್ನು ತದ ನಂತರ ಪ್ರಪಂಚವನ್ನು ಒಂದುಗೂಡಿಸುವ,

   ಪ್ರಯತ್ನದಲ್ಲಿ ಪ್ರತಿಯೊಬ್ಬರು ಭಾಗಿಯಾಗುವಂತೆ ಮಾಡುವುದು.
7. ಟ್ರಸ್ಟ್‌ಗೆ ದೊರೆಯುವ ಎಲ್ಲಾ ಮಾಹಿತಿಗಳನ್ನು ಎಲ್ಲರ ಜೊತೆಗೆ ಸಮರ್ಪಕವಾಗಿ ಹಂಚಿಕೊಳ್ಳುವುದಕ್ಕಾಗಿ ಒಂದು ವಿಶೇಷವಾದ ವೇದಿಕೆ ನಿರ್ಮಿಸುವುದು.
8. ಪ್ರಕೃತಿಗೆ ಹೊಂದಿಕೊಂಡು ಹೇಗೆ ಜೀವನ ನಡೆಸಬೇಕೆಂಬುದು ತಿಳಿದು ತನ್ಮೂಲಕ ' ಪರಿಸರ ಪ್ರೇಮಿ ' ಗಳಾಗಿ ಜೀವಿಸುವ ಕಲೆಯನ್ನು ಕಲಿಯುವುದು.
9. ಉದ್ದೇಶಿತ ಟ್ರಸ್ಟ್‌ನ ಆಜೀವ ಸದಸ್ಯರಿಗೆ (ಲೈಫ್ ಮೆಂಬರ್‌ಗೆ) ವಿಶೇಷ ಸೌಲಭ್ಯಗಳನ್ನು ಒದಗಿಸುವುದು.
10. ವಿಶ್ವದ ಮಹಾನ್ ಆಧ್ಯಾತ್ಮಿಕ - ಶಾಸ್ತ್ರಜ್ಞರ ಹಲವಾರು ಕೃತಿಗಳನ್ನು ಕನ್ನಡಕ್ಕೆ ತಂದು ಕನ್ನಡ ಭಾಷೆಯ ಕಂಪಿನ ಜೊತೆಯಲ್ಲಿ ವಿಶ್ವಭಾಷಿಕರ ಸೊಂಪು ಸಮ್ಮಿಳಿತಗೊಳಿಸುವುದು.
11. ಬ್ರಹ್ಮರ್ಷಿ ಪತ್ರೀಜಿಯವರ ತೆಲುಗಿನಲ್ಲಿರುವ ನೂರಾರು ಪರಿಕಲ್ಪನೆಗಳನ್ನು ಭಾಷಣಕಾರರಿಂದ ಹಾಗೂ ಸಂಗೀತದ ಸಮ್ಮಿಲನದೊಂದಿಗೆ ಕನ್ನಡದ ಧ್ವನಿ ಸುರುಳಿಗಳನ್ನಾಗಿ ಹೊರತರುವುದು.
12. ಭಾರತಾದ್ಯಂತವಿರುವ ಋಷಿಗಳು, ಶರಣರು, ಸಂತರು, ಯೋಗಿಗಳು ತಪಸ್ಸುಗಳು ಸಂಚರಿಸಿದ ಹಾಗೂ ಅವರು ಈ ನಾಡಿಗೆ ತಮ್ಮ ವಾಣಿಯಿಂದ ಸಂದೇಶಗಳನ್ನು ನೀಡಿದ ಸ್ಥಳಗಳನ್ನು ಆರಿಸಿ ಅಂತಹ ಸ್ಥಳಕ್ಕೆ ನಮ್ಮ **''ಟೂರ್ಸ್ ಮತ್ತು ಟ್ರಕ್ಕಿಂಗ್''** ಕಮಿಟಿ ಮೂಲಕ ಪ್ರತಿ ತಿಂಗಳು ಯಾತ್ರೆಯನ್ನು ಏರ್ಪಡಿಸುವ ಮೂಲಕ ಧ್ಯಾನ ಮಾಡುವ ಮತ್ತು ಧ್ಯಾನಾನುಭವ ಪಡೆಯುವ ಯೋಗವನ್ನು ಕಲ್ಪಿಸುತ್ತಿದ್ದೇವೆ.
13. ಬೆಂಗಳೂರಿನಲ್ಲಿ ಈಗಾಗಲೇ ನಿರ್ಮಿಸಿರುವ ವಿಶ್ವಾದಲ್ಲಿಯೇ ಅತಿ ದೊಡ್ಡ ಪಿರಮಿಡ್ಡನ್ನು ತೋರಿಸುವುದು ಹಾಗೂ ಅದರ ವಿಶೇಷತೆಯನ್ನು ವಿವರಿಸುವುದು.
14. ಮಾನಸಿಕ, ಆಧ್ಯಾತ್ಮಿಕ ಹಾಗೂ ಪ್ರಾಪಂಚಿಕವಾದ ಹಲವಾರು ಮಾರ್ಪಾಡುಗಳನ್ನು ನಮ್ಮ ನಮ್ಮಲ್ಲಿ ತರಲು ಪ್ರತಿ ತಿಂಗಳು ಪ್ರತಿಯೊಂದು ಜಿಲ್ಲೆಯಲ್ಲಿ ವಿಶೇಷವಾದ ಶಿಬಿರವನ್ನು ಏರ್ಪಡಿಸುವುದು.
15. ಪ್ರತಿ ತಿಂಗಳು ಒಂದು ಎರಡು ಮೂರನೇ ತಾರೀಖಿನಲ್ಲಿ ಕರ್ನಾಟಕದ ಪ್ರತಿಯೊಂದು ಗ್ರಾಮಗಳಿಂದ **ವಿಲೇಜ್ ಟು ವ್ಯಾಲಿ** ಎಂಬ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು ಮತ್ತು ಪ್ರತಿಯೊಬ್ಬರಿಗೂ ವಿಶ್ವಾದ ಅತಿ ದೊಡ್ಡ ಪಿರಮಿಡ್‌ನ್ನು ತೋರಿಸುವುದು ಹಾಗೂ ಬ್ರಹ್ಮರ್ಷಿ ಪತ್ರೀಜಿಯವರ ದರ್ಶನ ಮಾಡಿಸುವುದು.
16. ಪಿರಮಿಡ್ ವ್ಯಾಲಿಗೆ ಸಂದರ್ಶನಕ್ಕಾಗಿ ಬಂದವರಿಗೆ ಪಿರಮಿಡ್ ಧ್ಯಾನದಿಂದೊದಗುವ ಮಹತ್ವದ ಲಾಭಗಳನ್ನು ತಿಳಿಸಿಕೊಡುವ ವ್ಯವಸ್ಥೆ ಮಾಡಿಕೊಡುವ ಜೊತೆಗೆ, ಅವರಿಗೆ ಉಚಿತ ವಸತಿ, ಊಟದ ವ್ಯವಸ್ಥೆ ಏರ್ಪಡಿಸುವುದು.

## ಆಜೀವ ಸದಸ್ಯತ್ವ (ಲೈಫ್ ಮೆಂಬರ್) ಪಡೆಯಲು ದೇಣಿಗೆ ರೂ.2500/-
### ಆಜೀವ ಸದಸ್ಯರಿಗೆ ಕೆಳಕಂಡಂತೆ ಸೌಲಭ್ಯಗಳು ದೊರೆಯುತ್ತದೆ.

- ಧ್ಯಾನ ಕಸ್ತೂರಿ ಮಾಸ ಪತ್ರಿಕೆ 2 ವರ್ಷ ಉಚಿತ.
- ನಮ್ಮಲ್ಲಿ ಮುದ್ರಿತವಾದ ಪ್ರತಿ ಪುಸ್ತಕ, ಸಿ.ಡಿ. ಬೆಲೆಯಲ್ಲಿ 20 % ಡಿಸ್ಕೌಂಟ್
- ನಾವು ನಡೆಸಿಕೊಡುವ ಶಿಬಿರಗಳಿಗೆ 10% ಡಿಸ್ಕೌಂಟ್.
- ಟೂರ್ಸ್ ಮತ್ತು ಟ್ರೆಕ್ಕಿಂಗ್‌ನಲ್ಲಿ 5% ಡಿಸ್ಕೌಂಟ್.
- 2 ವರ್ಷ ಉಚಿತವಾಗಿ ಪಡೆದ ನಂತರ, ಮತ್ತೆ ನಾವು ಧ್ಯಾನ ಕಸ್ತೂರಿಗೆ ಚಂದಾದಾರರಾದರೆ 10% ಡಿಸ್ಕೌಂಟ್.
- ಪ್ರತಿ ತಿಂಗಳು ಎಲ್ಲಾ ವಿವರಗಳೊಂದಿಗೆ ನಿಮಗೆ ಮಾಹಿತಿ ಸಮರ್ಪಿಸಲಾಗುತ್ತದೆ. ಹಾಗೂ ನಿಮಗೆ ಅಗತ್ಯವಿರುವ ಎಲ್ಲ ರೀತಿಯ ಮಾಹಿತಿಗಳು ದೂರವಾಣಿಯಲ್ಲಿ ಲಭ್ಯವಾಗುವಂತೆ ವ್ಯವಸ್ಥೆಗೊಳಿಸಲಾಗುವುದು.
- ಪಿರಮಿಡ್ ವ್ಯಾಲಿಯಲ್ಲಿ ನಡೆಯುವ ಎಲ್ಲಾ ಶಿಬಿರಗಳಿಗೆ 5% ಶೇಕಡಾ ರಿಯಾಯಿತಿಯನ್ನು ಕೊಡಲಾಗುವುದು.

### ಪೋಷಕರು (ಪ್ಯಾಟ್ರನ್) ಪಡೆಯಲು ದೇಣಿಗೆ ರೂ.5,000/-

ಧ್ಯಾನ ಕಸ್ತೂರಿ ಪೋಷಕರು ಪ್ರತಿಯೊಬ್ಬ ಪೋಷಕರಿಗೆ ಐದು ವರ್ಷ ಧ್ಯಾನ ಕಸ್ತೂರಿ ಉಚಿತವಾಗಿ ನೀಡಲಾಗುತ್ತದೆ. ಹಾಗೂ ಪೋಷಕರ ಕುಟುಂಬದ ಫೋಟೋವನ್ನು ಧ್ಯಾನ ಕಸ್ತೂರಿಯಲ್ಲಿ ಮುದ್ರಿಸಲಾಗುತ್ತದೆ. ಅಲ್ಲದೆ, ಅವರ ವಿವರಗಳನ್ನು ನೀಡಲಾಗುತ್ತದೆ ಮತ್ತು ಲೈಫ್ ಮೆಂಬರ್‌ಗೆ ಲಭ್ಯವಿರುವ ಸೌಲಭ್ಯಗಳನ್ನು ನೀಡಲಾಗುತ್ತದೆ.

### ಪ್ರಮುಖ ಸೂಚನೆ :

ನಮ್ಮ ಧ್ಯಾನ ಕಸ್ತೂರಿ ಪುಸ್ತಕಗಳು ನಿಮಗೆ ತಲುಪದಿದ್ದಲ್ಲಿ, ಬೇರೆಯವರಿಗೂ ಈ ಪುಸ್ತಕ ದೊರೆಯದಿದ್ದಲ್ಲಿ
ಈ ದೂರವಾಣಿಯನ್ನು ಸಂಪರ್ಕಿಸಿ : **9902761761**

## ಆಜೀವ ಸದಸ್ಯತ್ವ(ಲೈಫ್ ಮೆಂಬರ್) / ಪೋಷಕರ ಚಂದಾ ನಮೂನೆ

ಇವರಿಗೆ,

ಕರ್ನಾಟಕ ಪಿರಮಿಡ್ ಧ್ಯಾನ ಪ್ರಚಾರ ಟ್ರಸ್ಟ್,

ನಂ.126, 2ನೇ ಮಹಡಿ, 7ನೇ ಮುಖ್ಯರಸ್ತೆ, 4ನೇ ಬ್ಲಾಕ್,

ಪೋಲೀಸ್ ಸ್ಟೇಷನ್ ಎದುರು, ಜಯನಗರ, ಬೆಂಗಳೂರು - 560 011.

ಫೋನ್ : 080-26646899, 9481359920, 9902761761

ಮಾನ್ಯರೇ,

ಧ್ಯಾನ ಪ್ರಚಾರ ಟ್ರಸ್ಟ್‌ನ ಆಜೀವ ಸದಸ್ಯತ್ವವನ್ನು ಪಡೆಯಲು ರೂ ........................ ನ್ನು ಧ್ಯಾನ ಪ್ರಚಾರ ಟ್ರಸ್ಟ್‌ನ ವಿಳಾಸಕ್ಕೆ ಪಾವತಿ ಮಾಡಿ ಕಳುಹಿಸಲಾಗಿದೆ. ಡಿ.ಡಿ. ಸಂಖ್ಯೆ ................ ತಾರೀಖು .......................... ಕಾಲಾವಧಿ ................................

ಹೆಸರು ಮತ್ತು ವಿಳಾಸ : ..........................................................................................

ಜಿಲ್ಲೆ: ................................ ರಾಜ್ಯ : ................................ ಪಿನ್ ಕೋಡ್ : ................................

ಇ-ಮೇಲ್ ................................................................ ಫೋನ್ : ................................

